# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮು,

**1—11—81** ರಿಂದ **28—2—82** ವರಗೆ

### ಶನಿ, ಭಾನು, ಸೋಮ ಮತ್ತುಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ , ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ (ಅರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

---

ಗಮನಿಕೆ :– 1 ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.




ಸಾಕ್ಷಾತ್ ಕೃಷ್ಣನೆ ಲೋಕಕೆ ಕರೆದುದು ದಿವ್ಯಾಮೃತವದು ಗೀತೆ
ಉಪನಿಷತ್ಸಾರವ ಪ್ರತಿಪಾದಿಸುವ ಭುವನ ಮಾನ್ಯವದು ಗೀತೆ
ಪಾರ್ಥನ ಶೋಕವ ನೀಗಿಸಿ ತಟ್ಟನೆ ಶಂಕೆಯ ಬಿಡಿಸಿತು ಗೀತೆ
ದೇಹವು ಅಸ್ಥಿರ ಆತ್ಮನೆ ನಿತ್ಯನು ಎನ್ನುತ ಮೆರೆವುದು ಗೀತೆ
ಇಂದ್ರಿಯ ಗೆಲುವ ಬುದ್ಧಿಯು ಲೇಶವು ಅಲುಕದು ಎಂದಿತು ಗೀತೆ
ಕಷ್ಟದಿ ತಗ್ಗದೆ ಸೌಖ್ಯದಿ ಹಿಗ್ಗದೆ ಜೀವಿಸಿ ಎಂದಿತು ಗೀತೆ
ಫಲವನು ಬಯಸದೆ ಕರ್ಮವ ಮಾಳ್ಪುವ ಮರ್ಮವ ತಿಳಿಸಿತು ಗೀತೆ
ಫಲಗಳಪೇಕ್ಷೆಯ ಬಿಡುವರೆ ಶಾಂತಿಯ ಪೊಂದುವರೆಂದಿತು ಗೀತೆ
ಬುದ್ಧಿಯ ಕೆಡಿಸುವ ಪಾಪಕೆ ಹೇತುವು ಕಾಮವು ಎಂದಿತು ಗೀತೆ
ಸಕಲವನೊಂದೇ ದೃಷ್ಟಿಯಿಂ ನೋಡುವರ್ ಜ್ಞಾನಿಗಳೆಂದಿತು ಗೀತೆ
ತನ್ನಯ ಧರ್ಮದಿ ನಡೆಯುವ ನರನಿಗೆ ಸಿದ್ಧಿಯ ಬಯಸಿತು ಗೀತೆ
ಧರ್ಮಕು ಶಾಸ್ತ್ರಕು ವಿಚಾರದ ಕರ್ಮಿಯೇ ಯೋಗಿಯು ಎಂದಿತು ಗೀತೆ
ಜ್ಞಾನದಿಂದಧಿಕವು ಬೇರೊಂದಿಲ್ಲವು ಎಂಬುದ ನರುಹಿತು ಗೀತೆ
ಜ್ಞಾನವ ಪೊಂದಲು ಸದ್ಗುರು ಸೇವೆಯ ಮಾಡಲು ಪೇಳಿತು ಗೀತೆ
ಜ್ಞಾನವೇ ಮುಕ್ತಿಗೆ ಪಥವೆಂದರಿವರು ಶ್ರೇಷ್ಠರು ಎಂದಿತು ಗೀತೆ
ಮನವನು ಎಲ್ಲವ ದೇವನಲಿಡುತಲಿ ಪೂಜಿಸಿ ಎಂದಿತು ಗೀತೆ
ಮಹಿಮೆನುಳ್ಳುವ ವಸ್ತುಗಳೊಳಗೆ ದೇವನಿಹನೆಂದಿತು ಗೀತೆ



ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ-ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ

**ಸಂಪುಟ 12] ಸಪ್ತಗಿರಿ ಡಿಸೆಂಬರ್ 1981 [ಸಂಚಿಕೆ 7**

# ವಿಷಯಸೂಚಿ

# ವಾರ್ತಾಲಹರಿ

## ಶ್ರೀ ವೆಂಕಟೇಶ್ವರ ಗೀತಮಾಲಿಕೆ ಕ್ಯಾಸೆಟ್ ಬಿಡುಗಡೆ

ದಿನಾಂಕ 30–10–81 ರಂದು ತಿರುಮಲೆಯ ಆರ್ಷಸದನ್‌ನಲ್ಲಿ ನಡೆದ ಸರಳ ಸಮಾರಂಭದಲ್ಲಿ ಆಂಧ್ರಪ್ರದೇಶದ ದೇವಾದಾಯ ಇಲಾಖಾ ಮಂತ್ರಿ ಶ್ರೀ ಪಿ. ವಿ. ಚೌದರಿ ಅವರು ತಿ.ತಿ.ದೇ. ಅನ್ನಮಾಚಾರ್ಯ ಪ್ರಾಜೆಕ್ಟ್ ನವರ ಶ್ರೀ ವೆಂಕಟೇಶ್ವರ ಗೀತಮಾಲಿಕೆಯ ಮೂರು ಕ್ಯಾಸೆಟ್‌ಗಳನ್ನು ಬಿಡುಗಡೆ ಮಾಡಿದರು. ಅನ್ನಮಾಚಾರ್ಯ ಕೃತಿಗಳ ಈ ಕ್ಯಾಸೆಟ್‌ಗಳಲ್ಲಿನ ಕಂಠಶ್ರೀಗಳೆಂದರೆ ಅದೇ ಪ್ರಾಜೆಕ್ಟ್‌ನ ಕುಮಾರಿ ಶೋಭಾರಾಜು, ಶ್ರೀ ಬಾಲಕೃಷ್ಣಪ್ರಸಾದ್ ಅವರದ್ದು. ಶ್ರೀ ರಾಮನಾಥನ್ ಅವರ ವಯೋಲಿನ್ ವಾದನವೂ ಉಂಟು. ಕ್ಯಾಸೆಟ್‌ಗಳ ಬಿಡುಗಡೆಯ ಸಂದರ್ಭದಲ್ಲಿ ಮಾತನಾಡಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು 1982. ನೆಯ ಜನವರಿಯ ಹೊತ್ತಿಗೆ ತಿ.ತಿ.ದೇ. ತನ್ನದೇ ಆದ ರಿಕಾರ್ಡಿಂಗ್ ರೂಂ ಅನ್ನು ಹೊಂದುವುದಾಗಿಯೂ ಮೊದಲನೆಯದಾಗಿ ಶ್ರೀ ವಿದ್ಯಾಪ್ರಕಾಶನಂದಗಿರಿ ಸ್ವಾಮಿಗಳ ಶ್ರೀ ಭಗವದ್ಗೀತಾ ಪ್ರವಚನಗಳ ಕ್ಯಾಸೆಟ್ ಹೊರತರಲು ಯೋಜಿಸಿರುವುದಾಗಿಯೂ ತಿಳಿಸಿದರು.

ಇದೇ ಸಭೆಯಲ್ಲಿ ಮುಜರಾಯಿ ಇಲಾಖಾ ಮಂತ್ರಿವರ್ಯರು ಡಾ॥ ರಾಣಿ ಶ್ರೀನಿವಾಸ ಶಾಸ್ತ್ರಿಯವರ ಭಾರತೀಯ ವಿಜ್ಞಾನ ಸರ್ವಸ್ವ ಕೃತಿಯನ್ನು ಬಿಡುಗಡೆ ಮಾಡಿದರು. ನಂತರ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರ ಸಂಗೀತ ಸಭೆ ನಡೆಯಿತು.

## ವಾರ್ಷಿಕೋತ್ಸವ

ಮದರಾಸಿನಲ್ಲಿನ ತಿ.ತಿ.ದೇ. ವಾರ್ತಾಕೇಂದ್ರದ 32ನೇ ವಾರ್ಷಿಕೋತ್ಸವವು ದಿನಾಂಕ 1–11–81 ರಂದು ಮದರಾಸಿನ ನಿವೃತ್ತ ನ್ಯಾಯಧೀಶ ಶ್ರೀ ಟಿ. ರಾಮಪ್ರಸಾದ್‌ರಾವ್ ಅವರ ಅಧ್ಯಕ್ಷತೆಯಲ್ಲಿ ಸರಳವಾಗಿ ನಡೆಯಿತು. ತತ್ಸಂಬಂಧವಾಗಿ ಏರ್ಪಡಿಸಲಾಗಿದ್ದ ಸುಪ್ರಭಾತಗಾಯನಸ್ಪರ್ಧೆಗಳಲ್ಲಿ ವಿಜೇತರಿಗೆ ಬಹುಮಾನಗಳನ್ನು ಖ್ಯಾತ ನಿರ್ಮಾಪಕ ನಿರ್ದೇಶಕ ಶ್ರೀ ಪಿ. ಪುಲಯ್ಯನವರು ನೀಡಿದರು. ಸಭೆಯಲ್ಲಿ ಕೇಂದ್ರಸಭೆಯ ಮಾಜಿ ಸದಸ್ಯರುಗಳಾದ ಶ್ರೀ ರೇಬಾಲ ಲಕ್ಷ್ಮೀನರಸಾರೆಡ್ಡಿ ಹಾಗೂ ಶ್ರೀ ಎಸ್. ಆರ್. ರಘೋತ್ತಮಾಚಾರ್ಯರು ಮಾತನಾಡಿದರು.

ಸಭೆಯನ್ನು ಸ್ವಾಗತಿಸುತ್ತ ತಿ.ತಿ ದೇ. ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರು ಮದರಾಸಿನ ವಾರ್ತಾಕೇಂದ್ರವನ್ನು ಕಲ್ಯಾಣ ಮಂಟಪ, ಪ್ರಾರ್ಥನಾಮಂದಿರ, ಪುಸ್ತಕ ಭಂಡಾರಗಳನ್ನು ಒಳಗೊಂಡ ಒಂದು ತಿ. ತಿ. ದೇ. ಕಾಂಪ್ಲೆಕ್ಸ್ ಅನ್ನಾಗಿ ಪರಿವರ್ತಿಸುವ ಯೋಜನೆಯಿದೆ.

## ಅಖಿಲಭಾರತ ಹರಿದಾಸ ಸಮ್ಮೇಳನ

1982 ರ ಜನವರಿ 21 ರಿಂದ 26 ರವರೆಗೆ ಆಂಧ್ರಪ್ರದೇಶದ ವಿಶಾಖಪಟ್ಟಣದಲ್ಲಿ ಅಖಿಲ ಭಾರತ ಹರಿದಾಸ ಸಮ್ಮೇಳನವನ್ನು ಏರ್ಪಡಿಸಲಾಗಿದೆ. ಶ್ರೀ ಗುರುಗೋವಿಂದ ವಿಠಲದಾಸರ ನೇತೃತ್ವದಲ್ಲಿ ನಡೆಯುವ ಈ ಸಮ್ಮೇಳನದಲ್ಲಿ ಭಾರತಾದ್ಯಂತ ಹರಡಿರುವ ಹರಿದಾಸರ, ವಿದ್ವಾಂಸರ, ಸಂಗೀತಗಾರರ ಸ್ವಾಗತಕ್ಕಾಗಿ ಸಿದ್ಧತೆಗಳು ನಡೆದಿವೆ. ಸಮ್ಮೇಳನದಲ್ಲಿ ತಿ. ತಿ. ದೇ. ದಾಸ ಸಾಹಿತ್ಯ ಪ್ರಾಜೆಕ್ಟ್‌ನಪರವಾಗಿ ಹರಿದಾಸ ವಸ್ತುಪ್ರದರ್ಶನವೂ, 'ಶ್ರೀ ಪುರಂದರದಾಸರು' ನಾಟಕ ಪ್ರದರ್ಶನವೂ ಏರ್ಪಾಡಾಗಿವೆ. ಕನ್ನಡ, ತೆಲುಗು, ಆಂಗ್ಲ ಭಾಷೆಗಳಲ್ಲಿ ಖ್ಯಾತ ಪಂಡಿತರಿಂದ ಉಪನ್ಯಾಸಗಳೂ ನಡೆಯುವ, ಹಾಗೂ ಹರಿದಾಸ ಸಾಹಿತ್ಯದ ವಿಶೇಷಗಳನ್ನು ಬೆಳಕಿಗೆ ತರುವ ಪ್ರಯತ್ನಗಳನ್ನು ತೀವ್ರಗೊಳಿಸುವ ಈ ಸಮ್ಮೇಳನದಲ್ಲಿ ಶ್ರೀ ಪುರಂದರ ದಾಸರ ಆರಾಧನೆಯನ್ನು ಒಂದು ಅಂಶವಾಗಿ ಜೋಡಿಸಲಾಗಿದೆ.

## ಡಾ॥ ಎನ್. ರಮೇಶನ್ ನಿಧನ

ಆಂಧ್ರಪ್ರದೇಶದ ಸರಕಾರದ ಮುಖ್ಯ ಕಾರ್ಯದರ್ಶಿಯಾಗಿ ನಿವೃತ್ತರಾದ ಡಾ॥ ಎನ್ ರಮೇಶನ್ ಅವರು ಹೈದರಾಬಾದಿನಲ್ಲಿ ದಿನಾಂಕ 3–11–81 ರಂದು ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ. ಶ್ರೀಯುತರು ಆಂಧ್ರಪ್ರದೇಶದ ಪ್ರಾಕ್ತನ ಇಲಾಖೆಯ ನಿರ್ದೇಶಕರಾಗಿ ಹಲವಾರು ವಿದ್ವತ್ಪೂರ್ಣ ಲೇಖನಗಳನ್ನು ಪ್ರಾಕ್ತನ ಶಾಸ್ತ್ರದಲ್ಲಿ ಜಗತ್ತಿಗೆ ನೀಡಿದ್ದರು. ಅವರು ತಿ.ತಿ.ದೇ. ಕಾರ್ಯ ನಿರ್ವಾಹಕ ಮಂಡಳಿಯ ಅಧ್ಯಕ್ಷರಾಗಿ ದೇವಸ್ಥಾನಗಳ ಪುರೋಭಿವೃದ್ಧಿಗಾಗಿ ಶ್ರಮಿಸಿದವರಾಗಿದ್ದರು ಈ ಚೆಗೆ ಅವರ ವಿದ್ವತ್ಪೂರ್ಣ ಆಂಗ್ಲ ಕೃತಿ ತಿರುಮಲೆಯ ಇತಿಹಾಸವನ್ನು ತಿ. ತಿ. ದೇ. ಬಿಡುಗಡೆ ಮಾಡಿತು ಎಂಬುದು ಗಮನಾರ್ಹ. ಅವರ ಆತ್ಮಕ್ಕೆ ಶ್ರೀ ವೆಂಕಟೇಶ್ವರ ಸ್ವಾಮಿ ಶಾಂತಿಯನ್ನು ನೀಡಲೆಂದು ಸಪ್ತಗಿರಿ ಪ್ರಾರ್ಥಿಸುತ್ತದೆ.

## ಪುಷ್ಪಯಾಗ

ನಿತ್ಯಕಲ್ಯಾಣ ಪಚ್ಚ ತೋರಣಗಳ ಸ್ವಾಮಿಯೆಂದು ಹೆಸರಾದ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಗೆ ನಿತ್ಯ ಒಂದು ಉತ್ಸವ, ನಿತ್ಯ ಒಂದು ಹಬ್ಬ. ಅಂತಹ ಹಲವಾರು ಉತ್ಸವಗಳಲ್ಲಿ ಪುಷ್ಪಯಾಗವೂ ಒಂದು. ಆಗಮೋಕ್ತ ಪುಷ್ಪಯಾಗವನ್ನು ದೇಶದ ಅರಿಷ್ಟ ನಿವಾರಣೆಗಾಗಿ ಮಾಡಲಾಗುತ್ತದೆ. ತಿ. ತಿ. ದೇ. ಶಾಸನಗಳಲ್ಲೂ ಒಂದೊಮ್ಮೆ ವಿಜೃಂಭಣೆಯಿಂದ ನಡೆಯುತ್ತಿದ್ದಿತೆಂದು ಉಲ್ಲೇಖಿತವಾಗಿರುವ ಪುಷ್ಪಯಾಗವನ್ನು ಹೋದವರ್ಷ ಪುನಃ ಚಾಲ್ತಿಗೆ ತರಲಾಯಿತು. ಅದರಂತೆ ವರ್ಷಕ್ಕೊಮ್ಮೆ ಶ್ರೀ ವೆಂಕಟೇಶ್ವರ ಸ್ವಾಮಿ ಭೂಮಿಯಲ್ಲಿ ಅವತರಿಸಿದ ನಕ್ಷತ್ರದಂದು ಈ ಯಾಗ ನಡೆಯುತ್ತದೆ.

ಈ ವರ್ಷದ ಪುಷ್ಪ ಯಾಗ ನವಂಬರ್ 5ರಿಂದ ಮಧ್ಯಾಹ್ನ ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿ ಆಲಯದ ಸಂಪಂಗಿ ಮಂಟಪದಲ್ಲಿ ವೈಭವದಿಂದ ನಡೆಯಿತು. ಸುಮಾರು 2450 ಕಿಲೋಗ್ರಾಂ ತೂಕದ 32 ಜಾತಿಯ ಹೂವುಗಳಿಂದ ಉತ್ಸವ ಮೂರ್ತಿಗೆ ಪುಷ್ಪಾಭಿಷೇಕವಾಯಿತು. ಸಂಪಂಗಿ ಮಂಟಪದಲ್ಲಿ ಯಜ್ಞ ವೊಂದನ್ನು ನಡೆಸಿ, ವಿಶ್ವ ಗಾಯತ್ರೀ ಮಂತ್ರದೊಂದಿಗೆ ನೂರೆಂಟು ಬಿಲ್ವ ಪತ್ರೆಗಳನ್ನು ಯಜ್ಞನಾರಾಯಣನಿಗೆ ಅರ್ಪಿಸ ಲಾಯಿತು. ತುಲಸೀ ಮಾಲೆಗಳಿಂದ ಅಲಂಕೃತ ವಾದ ಉಭಯ ನಾಯಕಿಯರಿಂದೊಡಗೂಡಿದ ಉತ್ಸವಮೂರ್ತಿಗೆ ಸಹಸ್ರಧಾರಾಭಿಷೇಕವನ್ನು ಮಾಡಲಾಯಿತು.

ಸಂಜೆ ಊಂಜಲ್ ಸೇವೆ ನಡೆಯಿತು. ಊಂಜಲ್ ಸೇವಾಮಂಟಪ, ಸಂಪಂಗಿ ಮಂಟಪ ಯಾಗಶಾಲೆಗಳೆಲ್ಲವನ್ನೂ ವಿವಿಧ ರೀತಿಯ ಹೂವು ಗಳಿಂದ ಹಾರ ಚಿತ್ರಗಳಿಂದ ಅಲಂಕರಿಸಲಾ ಗಿದ್ದು ದೇವಸ್ಥಾನದ ಸುತ್ತಲೂ ಸುಗಂಧ ಸ್ವರ್ಗ ಸೀಮೆಯಂತೆ ಪರಿಸರ ಕಂಗೊಳಿಸುತ್ತಿದ್ದಿತು.

5000 ರೂಗಳ ಆರ್ಜಿತ ಸೇವೆಯ ಈ ಪುಷ್ಪ ಯಾಗದಲ್ಲಿ ಬಹುಸಂಖ್ಯೆಯ ಆಸ್ತಿಕರು ಭಾಗವಹಿಸಿದ್ದು ತಿ.ತಿ.ದೇವಸ್ಥಾನಗಳ ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ, ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್ ಮತ್ತಿತರ ಅಧಿಕಾರಿಗಳು ಭಾಗವಹಿಸಿದ್ದರು. ಹೂವಿನ ಅಲಂಕಾರದ ಮೇಲು ವಿಚಾರಣೆ ತಿ.ತಿ.ದೇ. ಉಪವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ ಅವರದಾಗಿದ್ದಿತು.



---




ಕೋಲಾರ ಜಿಲ್ಲೆಯಲ್ಲಿರುವ 'ನಂದಿ'ಯು ನಿಸರ್ಗ ಸಂಪತ್ತಿನೊಂದಿಗೆ ಕಲಾವೈಭವ ವನ್ನು ಮೇಳವಿಸಿಕೊಂಡು ನಿಂತಿದೆ. ಇದೊಂದು ರಾಜ್ಯಕ್ಕೆ ನೀಡಿರುವ ವಿಶಿಷ್ಟ ಕೊಡುಗೆಯಾಗಿದೆ. ನಂದಿಬೆಟ್ಟವು ಬಿಸಿಲಿನ ಬೇಗೆಯಿಂದ ಪ್ರಕೃತಿಯ ದಾಹದಿಂದ ಕೂಡಿದ ದೇಹಮನಸ್ಸುಗಳನ್ನು ತೃಪ್ತಿಗೊಳಿಸಿದರೆ, ನಂದಿಗ್ರಾಮವು ಕಲೆಯ ದರ್ಶನಕ್ಕಾಗಿ ಹಾತೊರೆಯುವ ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತದೆ.

ನಂದಿಗ್ರಾಮವು ಆವತಿ ಬೈರೇಗೌಡನ ಕಾಲದ ಪಳೆಯುಳಿಕೆ; ಇಲ್ಲಿನ ದೇವಸ್ಥಾನವು ನೊಳಂಬ-ಪಲ್ಲವರ ಕೊಡುಗೆ. ಇದೊಂದು ಶಿಲ್ಪಕಲಾ ವೈಭವದ ಬೆರಗಿನ ತಾಣ; ಸೈನಿಕ ಶಕ್ತಿಯ ನೆಲವೀಡು; ಮತಪಂಥವೊಂದರ ಬೀಡು; ಐತಿಹಾಸಿಕ ಪರಂಪರೆಯ ಉಸಿರು; ಭೋಗ ನಂದೀಶನ ಭಾಗ್ಯದ ತವರು.

ನಂದಿಯು ಒಂದು ಕಾಲಕ್ಕೆ ಏಷ್ಯಾ ಮತ್ತು ಯೂರೋಪಿನ ಎಲ್ಲ ವಿಧವಾದ ತರಕಾರಿ ಮತ್ತು ಹಣ್ಣುಗಳ ತೋಟಗಳಿಂದ ತುಂಬಿದ ಪ್ರದೇಶವಾಗಿತ್ತು. ಇಲ್ಲಿನ ಪೇಟೆ ಬೀದಿಯು ಪ್ರಸಿದ್ಧವಾಗಿತ್ತು. ಬ್ರಿಟಿಷರ ಸೈನ್ಯ ಇಲ್ಲಿ ಬೀಡುಬಿಟ್ಟಿತ್ತು. ಕ್ರಿ. ಶ. 1808 ರಲ್ಲಿ ಸೈನ್ಯದ ತುಕಡಿಯನ್ನು ಇಲ್ಲಿಂದ ತೆಗೆಯಲಾಯಿತು. ಇಂತಹ ಸಂಪದ್ಭರಿತವಾಗಿದ್ದ ಸ್ಥಳದಲ್ಲಿ ಇಂದು ಉಳಿದಿರುವುದು ಕಲೆಯ ಸಂಪತ್ತು ಮಾತ್ರ.

ನಂದಿಯ ದೇವಸ್ಥಾನವು ದ್ರಾವಿಡ ವಾಸ್ತುಶಿಲ್ಪದ ಉತ್ತಮ ನಿದರ್ಶನ. ಸುಂದರ ಹಾಗೂ ಕುಸುರಿ ಕೆಲಸದ ಕಲಾ ಪ್ರದರ್ಶನ. ಕುರುಡುಮಲೆ, ಆವಣಿ, ಕೋಲಾರ, ತಲಕಾಡಿನ ದೇವಾಲಯುಗಳಲ್ಲಿಯೂ ಇಂತಹ ಕಲಾದರ್ಶನಗಳನ್ನು ಕಾಣುವೆವಾದರೂ ಇದಕ್ಕೆ ಅಗ್ರಸ್ಥಾನ. ಇದೊಂದು ಹಳೆಯಬೀಡಿನ ಹೊಯ್ಸಳೇಶ್ವರರ ಹಾಗೂ ಕಂಚಿಯ ಕೈಲಾಸನಾಥ ದೇವಾಲಯುಗಳಿಗೆ ಸಮವಾಗಿ ನಿಲ್ಲುವ ಸಮರ್ಥನ. ಇಂತಹ ದೇವಾಲಯದ ಇತಿಹಾಸ ಸಂಸ್ಕೃತಿ ಕಲೆಗಾರಿಕೆಗಳು ನಿಜಕ್ಕೂ ಬುದ್ಧಿ-ಬದುಕುಗಳ ಒಂದು ಅಧ್ಯಯನ.

ನಂದಿಯಲ್ಲಿ ಒಂದೇ ವೇದಿಕೆಯ ಮೇಲೆ ಎರಡು ದೇವಾಲಯುಗಳನ್ನು ಕಾಣಬಹುದು. ಉತ್ತರ ದಿಕ್ಕಿಗಿರುವುದು ಭೋಗನಂದೀಶ್ವರ; ದಕ್ಷಿಣ ದಿಕ್ಕಿಗಿರುವುದು ಅರುಣಾಚಲೇಶ್ವರ. ಪ್ರಾಕಾರದಲ್ಲಿರುವ ಇನ್ನೆರಡು ಪ್ರಮುಖ ದೇವಾಲಯಗಳೆಂದರೆ, ಅಪೀತಕುಚಾಂಬ (ಅರುಣಾಚಲೇಶ್ವರನ ಮಡದಿ) 2. ಪ್ರಸನ್ನ ಪಾರ್ವತಿ (ಭೋಗನಂದೀಶನ ಮಡದಿ) ಇವೆರಡರಲ್ಲಿ ಪ್ರಸನ್ನ ಪಾರ್ವತಿಯ ಮೂರ್ತಿ ಸುಂದರವಾಗಿದೆ.

ಭೋಗನಂದೀಶ ಮತ್ತು ಅರುಣಾಚಲೇಶ್ವರ ದೇವಸ್ಥಾನಗಳೆರಡಕ್ಕೂ ಹೊಂದಿಕೊಂಡಂತೆ ವಿಶಾಲವಾದ ಮುಖಮಂಟಪವಿದೆ. ನಂತರ ನಂದಿಮಂಟಪಗಳಿವೆ. ಎರಡು ದೇವಾಲಯಗಳಿಗೂ ಪ್ರತ್ಯೇಕವಾದ ನವರಂಗ, ಸುಖನಾಸಿ, ಗರ್ಭಗೃಹಗಳಿವೆ. ಸುಖನಾಸಿ-ನವರಂಗಗಳಲ್ಲಿರುವ ಶಿಲಾವಾತಾಯನಗಳು ವಿಶೇಷ ಲಕ್ಷಣಗಳನ್ನು ಹೊಂದಿವೆ. ಈ ಎರಡೂ ದೇವಾಲಯುಗಳ ನಡುವೆ ಮತ್ತೊಂದು ಮೂರ್ತಿಯನ್ನಿಡಲಾಗಿದೆ. ಇಲ್ಲಿರುವ ಕಲ್ಯಾಣಮಂಟಪವು ಸುಂದರ ಹಾಗೂ ಸೂಕ್ಷ್ಮ ಕಲೆಗಾರಿಕೆಯಿಂದ ಕೂಡಿದ್ದು ವೈಶಿಷ್ಟ್ಯಪೂರ್ಣವಾಗಿದೆ.

ಭೋಗನಂದೀಶನದೇ ಇಲ್ಲಿರುವ ದೇವಾಲಯಗಳಲ್ಲಿ ಹಳೆಯದಾದದ್ದು. ಇದನ್ನು ರತ್ನಾವಳಿಯಿಂದಲೋ ಅಥವಾ ಅವಳಿಗಾಗಿಯೋ ಕಟ್ಟಲಾಗಿದೆ. ರತ್ನಾವಳಿ ಬಾಣ ವಿದ್ಯಾಧರನ ಹೆಂಡತಿ ಹಾಗೂ ರಾಷ್ಟ್ರಕೂಟ ಇಂದ್ರನ ತಂಗಿ. ಈಕೆ ಪ್ರಭುಮೇರುವಿನ ತಾಯಿ, ಎಂತಲೇ ಈ ದೇವಾಲಯದ



ಭೋಗ ನಂದೀಶ್ವರ ದೇವಸ್ಥಾನದ ಗೋಡೆಯ ಮೇಲಿನ ಕಲಾವಿನ್ಯಾಸ

ಲೇಖನ: ಶ್ರೀ ಕೆ.ಆರ್. ನರಸಿಂಹ ಎಂ.ಎ.

ಚಿತ್ರಗಳು: ಜಿ. ಸೋಮಶೇಖರ್



ಭೋಗ ನಂದೀಶ್ವರ ದೇವಾಲಯ
ಜಾಲಂಧ್ರದ ಚಿತ್ರ.

ಪ್ರಾರಂಭಕಾಲ ಎಂಟನೆಯ ಶತಮಾನಕ್ಕೂ ಹಿಂದಕ್ಕೆ ಹೋಗುತ್ತದೆ. 'ಬಾಣಕುಲಲಲಾಟಕಿಟ್ಟ ತಿಲಕ' ವೆಂದು ಈ ದೇವಾಲಯದ ಬಗ್ಗೆ ಹೇಳಬಹುದಾದರೂ ಇದರ ವಿಕಾಸ ನೊಳಂಬ–ಪಲ್ಲವ, ಚೋಳ–ಹೊಯ್ಸಳ, ವಿಜಯನಗರ ರಾಜಮನೆತನಗಳಿಗೆ ಮೀಸಲೆನ್ನಬೇಕು.



ಕಸುರಿಗೆಲಸದ ಕಂಬ ಕೆತ್ತನೆ:

ಬಾಣಕುಲವಿಧ್ವಂಸನೆಂದು ಖ್ಯಾತನಾದ ಮಹೇಂದ್ರನ ತಂದೆ ಪೆರಾಳಚೇರ. (ಕಾಲ. 9ನೇ ಶತಮಾನ) ಈತ ನೊಳಂಬರ ರಾಜ. ನೊಳಂಬರು ತಮ್ಮನ್ನು ಪಲ್ಲವರೆಂದು ಕರೆದುಕೊಂಡಿದ್ದಾರೆ. ಪಲ್ಲವರಂತೆ ಇವರೂ ಸಹಾ ದೇವಸ್ಥಾನಗಳ ರಚನೆಯಲ್ಲಿ ಆಸಕ್ತಿಯುಳ್ಳವರಾಗಿದ್ದರು. ನೀತಿಮಾರ್ಗನ ತಂಗಿ ಜಯಬ್ಬೆಯನ್ನು ಪೆರಾಳಚೇರ ಮದುವೆಯಾಗಿದ್ದ. ಈತ ಪಲ್ಲವರನ್ನು ಸೋಲಿಸಲು ನೀತಿಮಾರ್ಗನಿಗೆ ಸಹಾಯ ನೀಡಿದ, ತಮ್ಮ ದಿಗ್ವಿಜಯದ ಜ್ಞಾಪಕಾರ್ಥವಾಗಿ ನೊಳಂಬರ ರಾಜ ನಂದಿಯಲ್ಲಿ ಭೋಗನಂದೀಶ್ವರ ದೇವಾಲಯವನ್ನು ಕಟ್ಟಿಸಿದನೆಂಬ ವಿವರಣೆ ಇತಿಹಾಸದಲ್ಲಿ ದೊರೆಯುತ್ತದೆ. ಹೀಗಾಗಿ ಪಲ್ಲವ ಕುಸುಮ ಶಿಲ್ಪಾವಳಿ ನಿಂತಿರುವ ದೇವಾಲಯವೇ ನಂದಿಯ ದೇವಾಲಯವೆನ್ನಬಹುದು.

ನಂದಿ ದೇವಾಲಯವು ಕಾಲಾಮುಖ ಪಂಥವೊಂದರ ಪ್ರಬಲ ಕೇಂದ್ರವೂ ಆಗಿತ್ತು. ಕಾಲಮುಖ ಪಂಥವು ಏಳನೇ ಶತಮಾನದಿಂದ ಐನೂರು ವರ್ಷಗಳವರೆಗೆ ಕರ್ನಾಟಕದಲ್ಲಿ ಹಬ್ಬಿ ನಿಂತಿತ್ತು. ಜೈನ–ಬೌದ್ಧಧರ್ಮಗಳ ಪ್ರಬಲ ವಿರೋಧವನ್ನು ಎದುರಿಸಿಯೂ ಉಳಿದುಕೊಂಡು ಬಂದಿದ್ದ ಪಂಥ ಇದಾಗಿತ್ತು. ಇದರ ಪ್ರಬಲ ಕೇಂದ್ರಗಳಲ್ಲೊಂದು ನಂದಿ. ಕಾಲಾಮುಖ ಗುರುವೊಬ್ಬನನ್ನು ಇಲ್ಲಿನ ಮಠದ ಅಧ್ಯಕ್ಷನೆಂದು ವಿವರಿಸಲಾಗಿರುವ ದಾಖಲೆಯೊಂದು ಇಲ್ಲಿ ಸಿಕ್ಕಿದೆ.

'ಕಲ್ಯಾಣ ಮಂಟಪವು'ವು ಈ ದೇವಾಲಯದ ಶಿಲ್ಪಸೌಧದ ಮೇಲಿಟ್ಟಿರುವ ಮಹಾಕಳಸ. ಇದನ್ನು ನಾಲ್ಕು ಕಂಬಗಳಿಂದ ಕಟ್ಟಲಾಗಿದೆ. ಇದಕ್ಕೆ ಬಳಸಿರುವ ಕಲ್ಲು ಮೃದುವಾಗಿ ಕೆತ್ತಲು ಸಾಧ್ಯವಾಗುವ ಕರಿಯ ಕಲ್ಲು, ಸುಂದರವಾಗಿ ಕೆತ್ತಿರುವ ಕಂಬಗಳು ಕಲೆಯ ಸೂಕ್ಷ್ಮತೆ ಹಾಗೂ ವಿವರಗಳಿಂದ ತುಂಬಿವೆ. ಇಂತಹ ಅತ್ಯಂತ ಉತ್ಕೃಷ್ಟವಾದ ಕುಶಲತೆಯನ್ನು ಹೊಯ್ಸಳರ ದೇವಾಲಯಗಳಲ್ಲಿಯೂ ಕಾಣುವುದು ಅಸಾಧ್ಯವೆನಿಸುತ್ತೆ.

ಪಕ್ಷಿಗಳು, ಪ್ರಾಣಿಗಳು, ಎಲೆಗಳು, ಮಾನವಾಕೃತಿಗಳನ್ನು ನಿರ್ದಿಷ್ಟ ಗಾತ್ರದಲ್ಲಿ ಇಲ್ಲಿ ಕೆತ್ತಲಾಗಿದೆ. ಭವ್ಯತೆಯ ಜೊತೆಗೆ ನಿಖರತೆಯನ್ನೂ ಸಾಧಿಸಿರುವುದು, ಇಲ್ಲಿನ ಮತ್ತೊಂದು ವಿಶೇಷ. ಪ್ರತಿಯೊಂದು ಕಂಬದ ಮೇಲೆಯೂ ಎರಡು ಸ್ತ್ರೀಮೂರ್ತಿಗಳನ್ನಿಡಲಾಗಿದೆ. ಹಬ್ಬಿರುವ ಬಳ್ಳಿಗಳಿಂದ ಕೂಡಿರುವ ಈ ಕಂಬಗಳ ಮೇಲೆ ಹಕ್ಕಿಗಳನ್ನು ಅವುಗಳ ಉನ್ನತ ಸ್ಥಾನಗಳಲ್ಲಿಡಲಾಗಿದೆ. ಇವಿಷ್ಟನ್ನೂ ಒಂದೇ ಕಲ್ಲಿನಲ್ಲಿ ಕೆತ್ತಿರುವುದು ಶಿಲ್ಪಿಯ ಚಮತ್ಕಾರ ಹಾಗೂ ಪ್ರತಿಭೆಯೇ ಸರಿ. ಮಂಟಪದ ಒಳಮಾಳಿಗೆಯಲ್ಲಿ ಅಷ್ಟದಿಕ್ಪಾಲಕರನ್ನು ಕೆತ್ತಿಡಲಾಗಿದೆ. ಮಂಟಪದಲ್ಲಿರುವ ತೋಲೆಗಳು ಪರಿಚಾರಕರು, ಶಿವ ಪಾರ್ವತಿ, ವಿಷ್ಣು–ಲಕ್ಷ್ಮಿ. ಅಗ್ನಿಸ್ವಾಹಾ, ಬ್ರಹ್ಮಸರಸ್ವತಿಯರ ಕೆತ್ತನೆಗಳಿಂದ ಕೂಡಿದ್ದು ನೋಡಲು ಮನೋಹರವಾಗಿವೆ. ಇಂತಹ ಸೂಕ್ಷ್ಮ–ಸುಂದರ ವಿವರಗಳಿಂದ ಕೂಡಿದ ಕಲ್ಯಾಣ ಮಂಟಪವು ಅಪೂರ್ವವೂ ಅತ್ಯುನ್ನತವೂ ಆಗಿ ನಿರ್ಮಾಣಗೊಂಡು ನಮ್ಮವರೆಗೆ ಉಳಿದುಕೊಂಡು ಬಂದಿರುವುದು ನಮ್ಮ ಸೌಭಾಗ್ಯವೆಂದೇ ಹೇಳಬಹುದು.

ಜಾಲಂಧ್ರಗಳು ದೇವಾಲಯದ ವೈಶಿಷ್ಟ್ಯ ಸೂಚಕ ಭಾಗಗಳು. ಇಲ್ಲಿನ ಜಾಲಂಧ್ರಗಳ ರಚನೆ ಕುತೂಹಲಕಾರಿಯಾದದ್ದು. ರಂಧ್ರ ಜಾಲಗಳಿಂದ ಕೂಡಿದ ಶಿಲಾವಾತಾಯನಗಳನ್ನು ಪಟ್ಟದಕಲ್ಲು ಎಲ್ಲೋರಗಳಲ್ಲಿಯೂ ಬಳಸಲಾಗಿದೆ. ಆದರೆ ಅತ್ಯಂತ ಸುಂದರವಾಗಿ ಆಲಂಕಾರಿಕವಾಗಿ ಕೊರೆಯಲಾದ ಶಿಲಾವಾತಾಯನಗಳು ಹೊಯ್ಸಳ ಶೈಲಿಗೇ ಮೀಸಲೆನ್ನಬೇಕು.

ನಂದಿಯ ದೇವಾಲಯಗಳಲ್ಲಿ ಒಟ್ಟು ಹತ್ತು ಇಂತಹ ಜಾಲಂಧ್ರಗಳನ್ನಿಡಲಾಗಿದೆ. ಭೋಗನಂದೀಶ್ವರನ ದೇವಾಲಯದಲ್ಲಿ ನಾಲ್ಕು, ಅರುಣಾಚಲೇಶ್ವರನ ದೇವಸ್ಥಾನದಲ್ಲಿ ನಾಲ್ಕು, ಮಧ್ಯೆ ಇರುವ ಮೂರ್ತಿಯ ಹಿಂದುಗಡೆ ಇರುವ ಗೋಡೆಯಲ್ಲಿ ಎರಡು ಜಾಲಂಧ್ರಗಳಿವೆ. ಅರುಣಾಚಲನ ನವರಂಗದ ದಕ್ಷಿಣ ಜಾಲಂಧ್ರ ತಾಂಡವೇಶ್ವರನಿಗಾಗಿ ಕೆತ್ತಲಾಗಿದ್ದರೆ, ಉತ್ತರದ ಜಾಲಂಧ್ರ ನರ್ತಕಿ ಹಾಗೂ ಪುರುಷ ಗಾಯಕನೊಬ್ಬನಿಂದ ತುಂಬಿಕೊಂಡಿದೆ. ಸುಖನಾಸಿಯ ದಕ್ಷಿಣ ಶಿಲಾವಾತಾಯನವು ಬಳಿಯಲ್ಲಿರುವ ದೈತ್ಯನೊಬ್ಬನನ್ನೊಳಗೊಂಡಿದ್ದರೆ, ಉತ್ತರದ

(34 ನೇ ಪುಟ ನೋಡಿ)

## ಶ್ರೀ ವ್ಯಾಸರಾಜ ಕೃತ

# ಕನ್ನಡ ಭಗವದ್ಗೀತಾ ಸಾರ

[ರಾಗ ಛಾಪುತಾಳ: -(ಪಾಲಿಸು ಪಂಢರಿಪುರಿರಾಯ ಯಂಬಂತೆ]

ಕೇಳಯ್ಯ ಎನ ಮಾತು ಪಾರ್ಥನೇ । ಗೀತಾದರ್ಥವ ॥ಪ॥

ಕುರುಕ್ಷೇತ್ರದಿ । ಎನ್ನವರು ಪಾಂಡವರು ।
ಪೇಳೊ ಸಂಜಯ । ಏನು ಮಾಡುವರು ಕೂಡಿ ॥
ಕೇಳೈ ಅರಸನೇ । ನೋಡು ಪಾಂಡವರವರ ಸೇನೇ ।
ಮಾತಾಡಿದಾ ನಿನ್ನ ಸುತಗೆ ದ್ರೋಣನಿಂದು ॥ ॥೧॥

ಕೇಳಿತಾ ಪಾರ್ಥನು ಕುರುದಂಡ । ರಣದಲ್ಲಿ ಚಂಡಾ ।
ಗಾಂಡೀವಕರದಂಡ । ಅಚ್ಯುತ ಪಿಡಿರಥ ನಡೆಮುಂದಾ ।
ಬಹು ತ್ವರದಿಂದ ನೋಡುವೆ ನೇತ್ರ ದಿಂದ ।
ಗುರು ಹಿರಿಯರ ಕೂಡ ಯಾಕೆಂದ । ಯುದ್ಧ ಸಾಕೆಂದ ।
ಭಿಕ್ಷವೇ ಸುಖವೆಂದ । ಕುಂತೀ ಸುತ ಈ ಮಾತು ಉಚಿತಲ್ಲಾ ।
ನಿನಗಿದು ಸಲ್ಲಾ ಪಿಡಿ ಗಾಂಡೀವ ಬಿಲ್ಲ । ಕೇಳಯ್ಯ ॥

ಬಾಲಯ್ಯ ಯವ್ವನ ಮುಪ್ಪುತನ ದೇಹದಲ್ಲಿ ।
ಇಂಥ ದೇಹಕೆ ಮೋಹಮತ್ಯಾತಕಲ್ಲಿ ।
ಕಾಯ್ದು ಕೊಲ್ಲುವನಾನು ಇರುತಿರುಲು ಇಲ್ಲಿ ।
ಬಿಲ್ಲು ಪಿಡಿದು ಕೀರ್ತಿ ಪಡೆ ಲೋಕದಲ್ಲಿ ॥ ॥೨॥

ಶಸ್ತ್ರದಂಜಿಕೆಯಿಲ್ಲ ಜೀವಕ್ಕೆ ಈ ದೇಹಕ್ಕೆ । ಪಾವಕನದಾಹಕ್ಕೆ ।
ಉದಕಗಳಿಂದ ವೇದನೆ ಯಾತಕ್ಕೆ । ಈ ಜೀವಕ್ಕೆ ।
ಮಾರುತದ ಶೋಷಕ್ಕೆ । ನಿತ್ಯ ಅಭೇದ್ಯತಾ ಜೀವನ । ಸನಾತನ ।
ವಸ್ತ್ರದ್ಹಾಂಗೆ ಈತನವು ಆದಾವು ಪೋದಾವು ನಿನಗಯ್ಯಾ
ಆದನಾಬಲ್ಲೆನಯ್ಯಾ । ಪಿಡಿಯೆನ್ನೊಳು ನೀಕಯ್ಯಾ ॥ಕೇಳಯ್ಯ॥

ಜ್ಞಾನ ದೊಡ್ಡದು ಕರ್ಮ ಬಂಧವ ಬಿಟ್ಟು ।
ಕರ್ಮ ಬಿಟ್ಟರೇ ಪ್ರತ್ಯ ವಾಯು ವೆಷ್ಟು ।
ಫಲ ಬಿಟ್ಟು ನೀಮಾಡು ಕರ್ಮಗಳ ।
ಸಮದೇಹಕೆ ಫಲ ಕರ್ಮ ಕಾರಣವಲ್ಲ ॥೩॥

ಕರ್ಮದಲ್ಲೇ ನಿನಗಧಿಕಾರ । ಫಲ ತಾ ದೂರ ।
ಧನಂಜಯಗೋಸ್ಕರ । ಜ್ಞಾನ ದೊಡ್ಡದು ಕರ್ಮ ದೂರಯ್ಯ ।
ಇತ್ತ ಬಾರಯ್ಯ । ಯೋಗ ಬುದ್ಧಿ ಮಾಡಯ್ಯ ।
ಜಿತ ಬುದ್ಧಿ ಯಾವುದೈ ಕೇಶವ । ಜಗತ್ಪಾಶವ ।
ನೋಡಿದೆ ಪರಮೇಶ । ಗೋವಿಂದನಲಿ ಮನವಿ(ಸಿ)ಟ್ಟವ
ಕಾಮಬಿಟ್ಟವ । ಜಿತದೇಹ ತಾನವ ॥ಕೇಳಯ್ಯ॥

ಜ್ಞಾನ ದೊಡ್ಡದು ಕರ್ಮದಲ್ಯಾಕೆ ಯನ್ನಾ
ಬುದ್ಧೀ ಮೋಹಿಸಿ ಕೃಷ್ಣ ಕೇಳೈಯ್ಯ ಬಿನ್ನ
ಕರ್ಮ ವಿಲ್ಲದೆ ಮೋಕ್ಷಫಲ ಉಂಟೆ ಇನ್ನಾ
ಕರ್ಮ ಮೋಕ್ಷದ ಬುದ್ಧಿಗೇ ಬೀಜವಲ್ಲೇ ? ॥ ॥೪॥



ಯುದ್ಧ ಕರ್ಮವ ಮಾಡೋ ಪಾಂಡವ । ರಣತಾಂಡವ ।
ವೈರಿಷಂಢನೆಂಬುವಾ । ಜನರೆಲ್ಲ ಮಾಳ್ಪರೊ ನಿನ್ನ ನೋಡಿ ।
ಮತ್ತೆನ್ನ ನೋಡಿ । ನೋಡಿದರೆ ನೀ ಬೇಡೀ ।
ಯನಗ್ಯಾಕೆ ಪೇಳಯ್ಯ ಜನ ಕರ್ಮ ಕ್ಷತ್ರಿಯ ಧರ್ಮ ।
ನಷ್ಟವಾಗುವುದು ಧರ್ಮ ಅರ್ಪಿಸುಯೆನ್ನಲ್ಲಿ ಸರ್ವವು ।
ಬಿಟ್ಟು ಗರ್ವವು । ತಿಳಿಯೆನ್ನೊಳು ಸರ್ವವೂ ॥ಕೇಳಯ್ಯ॥

ಯೋಗ ಸನ್ಯಾಸ ವೆರಡು ಮುಕ್ತಿಗೆ ದೃಢವು ।
ಭೋಗ ವರ್ಜಿತ ಕೇಳು ಸನ್ಯಾಸಿಯಿರವು ।
ಹ್ಯಾಗೆ ಪದ್ಮಕೆ ಪಾಣಿಯ ಲೇಪವಿಲ್ಲ ।
ಹಾಗೆ ಭಕ್ತಿಗೆ ಸಂಸ್ಕೃತಿಯು ಇಲ್ಲ ॥ ॥೫॥

ಅಜನಲ್ಲಿ ದ್ವಿಜನಲ್ಲಿ ಗಜನಲ್ಲಿ ಸಮ ನಾನಲ್ಲಿ ಭಜಿ ಪರ ಮನದಲ್ಲಿ ।
ಮನಸು ಯಾರ ಜೀವನ ಒಂದು । ಇತ್ತು ಬಾರೆಂದು ।
ಮತ್ತೆ ವೈರಿದಾರೆಂದು। ಲೋಷ್ಟಕಾಂಚನ ನೋಡು ಸಮಮಾಡಿ
ಆಸನ ಹೂಡಿ । ನಾಶಿಕ ತುದಿ ನೋಡಿ । ಧ್ಯಾನಮಾಡು ಹರಿ
ಅಲ್ಲಿಹ । ಅವನಲ್ಲಿಹ । ಯೋಗ ಸನ್ನಿಹಿತದವನೇ ॥ಕೇಳಯ್ಯ॥

ಯಾರ ಭಕ್ತಿಯು ಎನ್ನ ಪಾದಾಬ್ಜದಲ್ಲಿ ।
ಘೋರ ಸಂಸಾರ ಯಾತನೆ ಆವರಿಗೆಲ್ಲಿ ।
ಶರೀರವೇ ಕ್ಷೇತ್ರವೆಂತೆಂದು ತಿಳಿಯೋ ।
ಮರೆಯದೆ ಕ್ಷೇತ್ರಜ್ಞನೆಂದೆನ್ನ ತಿಳಿಯೋ ॥ ॥೬॥

ಶರೀರದೊಳಗಿದ್ದು ಪಾಪಿಲ್ಲ । ದುಃಖ ಲೇಪಿಲ್ಲ ಆಕಾಶವು ಇದು
ಯಲ್ಲಾ । ಯಾತರಿಂದ್ಹುಟ್ಟಿತು ಈ ಗುಣಾ ಮೂರು ಸದ್ಗುಣ ।
ಕೇಳಯ್ಯ ಫಲ್ಗುಣ । ಸುಖದುಃಖ ಸಮ ಮಾಡಿ ನೋಡು ನೀ
ಈಡ್ಯಾಡು ನೀ ಚಂದ್ರ ಸೂರ್ಯರ ತೇಜ ಯೆನದಯ್ಯ ಗುಡ
ಕೇಶಯ್ಯಾ । ಅನ್ನ ಪಚನ ಯೆನದಯ್ಯಾ ॥ಕೇಳಯ್ಯ॥

ನಾನೇ ಉತ್ತಮ ಮನಸು ಎನ್ನಲ್ಲಿ ಮಾಡೋ ।
ಜ್ಞಾನ ಅಜ್ಞಾನ ಪೇಳುವೆ ತಿಳಿದು ನೋಡೋ ।
ಜ್ಞಾನ ದುರ್ಲಭ ಅವರ ಭಕ್ತಿಗಳಂತೆ ।
ನಾನು ಕೊಡುವೆನು ಫಲವ ಮನಸು ಬಂದಂತೆ । ॥೭॥

ಸ್ಮರಣೆ ಮಾಡುತ ದೇಹ ಬಿಡುವರೋ । ಎನ್ನ ಪಡೆವರೋ ।
ಬಲು ಭಕ್ತಿ ಮಾಡು ವರೋ । ಅನಂತ ಚೇತನ ಸುಳಿವೇನು ।
ಹರಿಸುಲಭನು । ಮತ್ತೆ ಜನನ ವಿಲ್ಲವಗೇ । ಯನ್ನ ಭಕ್ತ
ಗಿಲ್ಲ ನಾಶವು ಸ್ವರ್ಗದಾಸೆಯು ಇಟ್ಟು ಚರಣ ಭಕುತಿಯು
॥ಕೇಳಯ್ಯ॥

ಕೃಷ್ಣ ತೋರಿಸು ನಿನ್ನ ವಿಭೂತಿ ರೂಪ ।
ಇಷ್ಟಪೂರತಿಯಾಗಲೋಯೆನಗೆ ಶ್ರೀಪ ।
ರಾಮನಾನೈಯ್ಯ ರಾಜರ ಗುಂಪಿನಲ್ಲಿ ।
ಸೋಮ ನಾನಯ್ಯ ತಾರಕಾ ಮಂಡಲಾದಲ್ಲಿ ॥೮॥

ಅಕ್ಷರದೊಳಗೆ ಆಕಾರನು । ಗುಣಸಾರನು । ಪಕ್ಷಿಗಳಲ್ಲಿ ನಾನು ।
ಗರುಡನು ಸಕಲ ಜಾತಿಗಳಲ್ಲಿ ಶ್ರೇಷ್ಠತನದಲ್ಲಿ ಎನ್ನ
ರೂಪ ತಿಳಿಯಲ್ಲಿ । ತೋರಿಸೊ ಶ್ರೀಕೃಷ್ಣ ನಿನ್ನ ರೂಪ
ನಾನಾ ರೂಪ ಅರ್ಜುನ ಈ ನೋಡೊ ರೂಪ । ಕಂಡನು
ತನ್ನನ್ನು ಸಹಿತದಿ ಹರಿ ದೇಹದೀ । ಬ್ರಹ್ಮಾಂಡಗಳಲ್ಲಿ
॥ಕೇಳಯ್ಯ॥

ಕ್ಷರ ಅಕ್ಷರ ಯರಡಕ್ಕು ಉತ್ತಮನು ।
ಘೋರ ನರಕಕೆ ಲೋಭಕಾಮನು ನಾನು ।
ಸಾರದಾನವು ಸಜ್ಜನರ ಹಸ್ತದಲ್ಲಿ ।
ಭೂರಿ ದಕ್ಷಿಣೆ ನೀಡೋ ಸತ್ಪಾತ್ರದಲ್ಲೀ । ॥೯॥

ಸರ್ವ ದಾನದಕ್ಕಿಂತ ಯೆನ ಭಕ್ತಿ । ಕೇಳೋ ಭೂಶಕ್ತಿ ।
ಮಾಡಯ್ಯ ವಿರಕ್ತಿ । ಕೃಷ್ಣ ಹರಣವಾಯ್ತು ನಿನ್ನಿಂದ ಮೋಹ
ಯನ್ನಿಂದ । ಬಹು ಸೂವಾಕ್ಯ ದಿಂದ । ಕೃಷ್ಣ ಭೀಮಾನುಜರ
ಸಂವಾದ। ಮಹ ಸುಖ ಪ್ರದ । ಧೃತರಾಷ್ಟ್ರ ಕೇಳಿದ । ಬಲ್ಲೆನು
ವ್ಯಾಸರ ದಯದಿಂದ । ಮನಸೀನಿಂದ ಕೃಷ್ಣನಲ್ಲೆ ಜಯವೆಂದ ।
॥ಕೇಳಯ್ಯ॥



# ದಾಸ ಸಾಹಿತ್ಯದ ಎರಡು ಹಂತಗಳು

ಶ್ರೀ ಡಿ. ಮಾಧವಮೂರ್ತಿ

ಭಾರತದ ಭಕ್ತಿ ಭಾಗೀರಥಿಯು ನಿರಂತರ ಹರಿಯುವಂತೆ ಮಾಡಿ ಲೋಕೋತ್ತರ ಶ್ರೇಯಸ್ಸನ್ನು ಸಾಧಿಸಿದ ಪಂಥಗಳಲ್ಲಿ ದಾಸ ಪಂಥ ಅತ್ಯಂತ ಮಹತ್ವದ್ದು. ಬಹು ಪುರಾತನ ಕಾಲದಿಂದಲೂ ಭಾಗವತ ಸಂಪ್ರದಾಯವು ಕರ್ನಾಟಕದಲ್ಲಿ ರೂಢ ಮೂಲವಾಗಿದ್ದು, ಹರಿದಾಸ ಪರಂಪರೆ ಪ್ರಾರಂಭವಾದ ಮೇಲೆ ಇಡೀ ಪಂಥಕ್ಕೆ ಒಂದು ಹೊಸ ಆಯಾಮವನ್ನು ಮೂಡಿಸಿತು. ಕೃಷ್ಣ ಭಕ್ತಿಯನ್ನು ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಪ್ರಚಾರಕ್ಕೆ ತಂದ ಹಾಗೂ ದಾಸ ಸಾಹಿತ್ಯಕ್ಕೆ ಬೀಜಾಂಕುರ ಮಾಡಿದ ಶ್ರೀ ಮಧ್ವಾಚಾರ್ಯರ "ದ್ವಾದಶ ಸ್ತೋತ್ರ" ಮುಂದಿನ ದಾಸ ಪಂಥದ ಸಾಹಿತ್ಯ ಸೃಷ್ಟಿಯ ಬೀಜ ರೂಪವಾಗಿದೆ.

ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ನರಹರಿ ತೀರ್ಥರು ಮೊಟ್ಟಮೊದಲ ಬಾರಿಗೆ ಕನ್ನಡದಲ್ಲಿಯೇ ಕೀರ್ತನೆಗಳನ್ನು ರಚಿಸಿದ ಕೀರ್ತಿಗೆ ಭಾಜನರಾಗಿದ್ದಾರೆ. ಅವರ "ಹರಿಯೇ, ಇದು ಸರಿಯೇ", "ತಿಳಿಕೋ ನಿನ್ನೊಳು ನೀನೆ" "ಮಾತಿನಲ್ಲಿ ಹರಿದಾಸತನ, ನೀತಿಯಲ್ಲಿ ಪ್ರಭುದಾಸತನ" ಮುಂತಾದ ಕೃತಿಗಳು ಅರ್ಥಪೂರ್ಣವಾಗಿ ವಿಜೃಂಭಿಸುತ್ತವೆ.

ನರಹರಿ ತೀರ್ಥರ ನಂತರ ಶ್ರೀ ಪಾದರಾಜರು ಅಚ್ಚ ಕನ್ನಡದಲ್ಲಿ ಕೃತಿಗಳನ್ನು ರಚಿಸಿ ಪೂಜಾ ಕಾಲದಲ್ಲಿ ಮಠದಲ್ಲಿ ಈ ದೇವರ ನಾಮಗಳನ್ನು ಹಾಡಿಸುವ ಪದ್ಧತಿಯನ್ನು ಪ್ರಾರಂಭಿಸಿದರು. ಈ ಉದ್ದೇಶಕ್ಕಾಗಿಯೇ ತಾವೇ ಸ್ವಂತವಾಗಿ "ಭ್ರಮರ ಗೀತೆ", "ವೇಣುಗೀತೆ", "ಗೋಪಿಗೀತೆ"ಗಳನ್ನು ರಚಿಸಿ ಅವುಗಳೊಡನೆ ಅನೇಕ ಕೀರ್ತನೆ, ಸುಳಾದಿಗಳನ್ನು ಹಾಗೂ ಅನೇಕ ಉಗಾಭೋಗಗಳನ್ನು ರಚಿಸಿದರು. ಆದರೆ ದಾಸ ಸಾಹಿತ್ಯದ ಸುವರ್ಣ ಯುಗವೆನ್ನಬಹುದಾದ ಕಾಲ ಪುರಂದರದಾಸರು ಹಾಗೂ ವ್ಯಾಸರಾಜರ ಕಾಲ. ವಿಜಯನಗರ ಸಾಮ್ರಾಜ್ಯ ಉನ್ನತ ಸ್ಥಿತಿಯಲ್ಲಿದ್ದು, ಕೃಷ್ಣದೇವರಾಯನ ರಾಜ ಗುರುಗಳೆನಿಸಿ ಆತನ ಕುಹು ಯೋಗವನ್ನು ಕಳೆದು ಸ್ವರ್ಣವೃಷ್ಟಿ ಸುರಿಸಿದ ಮಹಾ ಮಹಿಮರೆನಿಸಿದ ವ್ಯಾಸರಾಜರು, ಅವರ ಶಿಷ್ಯರೆನಿಸಿದ ನಾರದಾಂಶ ಸಂಭೂತರಾದ ಪುರಂದರದಾಸರು, ಹಾಗೂ ಕನಕದಾಸರ, ವಿಷ್ಣು ಭಕ್ತಿ, ಶಿಷ್ಯ ಪ್ರೇಮ ಹಾಗೂ ಅಪಾರ ವಿದ್ವತ್ತುಗಳ ತ್ರಿವೇಣಿ ಸಂಗಮವಾಗಿ ಮುಂದಿನ ಶತಶತಮಾನಗಳ ದಾಸ ಸಾಹಿತ್ಯದ ಭಂಡಾರದ ಭವ್ಯ ಕೊಡುಗೆಯನ್ನು ಸಮಾಜಕ್ಕೆ ನೀಡಿದರು. ವ್ಯಾಸರಾಯರಿಂದ ಮುದ್ರೆ, ಮಂತ್ರೋಪದೇಶ, ಅಂಕಿತ, ವೈಷ್ಣವ ದೀಕ್ಷೆ ಹಾಗೂ ಹರಿದಾಸ್ಯಗಳನ್ನು ಪಡೆದು ಕೊಂಡು ಪುರಂದರದಾಸರು



ವ್ಯಾಸರಾಯರ ಚರಣ ಕಮಲ
ದರುಶನವೆನಗೆ,
ಏಸು ಜನ್ಮದ ಸುಕೃತ ಫಲದೊರ
ಕಿತೋ ಎನ್ನ
ಸಾಸಿರ ಕುಲ ಕೋಟಿ ಪಾವನವಾಯಿತು
ಶ್ರೀಶನ ಭಜಿಸುವುದಕಧಿಕಾರಿ ನಾನಾದೆ
ದೋಷರಹಿತನಾದ ಪುರಂದರ ವಿಠಲನ
ದಾಸರ ಕರುಣವೆನ್ನ ಮೇಲಿರಲಾಗಿ

ಎಂದು ಭಕ್ತಿಭಾವದಿಂದ ಗುರುಗಳನ್ನು ಕುರಿತು ಹಾಡಿದ್ದಾರೆ. ಗುರುಗಳಾದ ವ್ಯಾಸರಾಜರು ಪುರಂದರದಾಸರ ಬಗ್ಗೆ ಅಪಾರ ಅಭಿಮಾನ ವ್ಯಕ್ತಪಡಿಸಿ "ದಾಸರೆಂದರೆ ಪುರಂದರದಾಸರಯ್ಯ" ಎಂದು ಹೃತ್ಪೂರ್ವಕವಾಗಿ ಹಾಡಿ ಹರಸಿದ್ದಾರೆ. ಅನಂತರ ಈ ದಾಸ ಪರಂಪರೆಯಲ್ಲಿ ಬಂದ ಎಲ್ಲಾ ದಾಸರೂ ಅವರ ಕೃತಿಗಳಲ್ಲಿ ಪುರಂದರ ದಾಸರ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ನಾರದರ ಅವತಾರ ಅವರೆನ್ನುವುದನ್ನು ಮುಕ್ತ ಕಂಠದಿಂದ ಹಾಡಿರುವುದನ್ನು ಕಾಣಬಹುದು. ಹರಿದಾಸ ಪಂಥ, ದಾಸಕೂಟದ ಹಿರಿಯರೆನಿಸಿ ಪುರಂದರ ದಾಸರು ಸರ್ವಶ್ರೇಷ್ಠರೆನಿಸಿದ್ದಾರೆ.

ಮಧ್ವಾಚಾರ್ಯರ ದ್ವೈತ ತತ್ತ್ವದ ಸಮಸ್ತ ಸಾರವನ್ನೂ ಪುರಂದರದಾಸರು ತಮ್ಮ ಅಚ್ಚ ಕನ್ನಡದ ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಪದಗಳಲ್ಲಿ ಸಮರ್ಥವಾಗಿ, ಸರಳವಾಗಿ ಅಭಿವ್ಯಕ್ತಿಸಿರುವುದನ್ನು ನಾವು ಕಾಣಬಹುದು. ಸಂಗೀತ ಶಾಸ್ತ್ರದಲ್ಲೂ ಹೆಚ್ಚಿನ

ಪಾಂಡಿತ್ಯ ಹೊಂದಿರುವ ಇವರು ಕರ್ನಾಟಕ ಸಂಗೀತ ಪಿತಾಮಹರೆನಿಸಿದ ಶ್ರೇಷ್ಠ ವಾಗ್ಗೇಯಕಾರರು. ಸಾಮಾನ್ಯ ಜನತೆಯ ಬುದ್ಧಿ ಮನಸ್ಸು ವಿಕಾಸಗೊಳ್ಳುವಂತೆ ಜೀವನ ಧರ್ಮವನ್ನು ಬೋಧಿಸಿದ ಸಂಸ್ಕೃತಿ ಶಿಕ್ಷಕರು ಇವರು ಇವರ ಈ ಎಲ್ಲಾ ಶಾಸ್ತ್ರಾರ್ಥಸಾರ ರೂಪವಾದ ಪದಗಳು "ಪುರಂದರೋಪನಿಷತ್" ಎಂದೇ ಜನಜನಿತವಾಗಿದೆ.

ದಾಸ ಸಾಹಿತ್ಯ, ಕನ್ನಡ ಭಾಷೆಗೆ ಹರಿದಾಸರ ಶ್ರೀಮಂತ ಕೊಡುಗೆ ಶೃಂಗೇರಿ ಹುಚ್ಚೂರಾಯರ ಮಾತಿನಲ್ಲಿ ಹೇಳುವುದಾದರೆ, "ದಾಸರೊಬ್ಬರು ನಮ್ಮಲ್ಲಿ ಆಗಿ ಹೋಗದಿದ್ದರೆ ವೇದಾಂತ ತತ್ತ್ವಗಳು ಒತ್ತಟ್ಟಿಗೆ ಉಳಿಯುತ್ತಿದ್ದವು ಮತ್ತು ಸಾಮಾನ್ಯ ಜನರು ಒಂದು ನಿಟ್ಟಿಗೆ ಉಳಿಯುತ್ತಿದ್ದರು." ದಾಸರ ಕೃತಿಗಳು "ಕನ್ನಡ ವೇದ"ಗಳೆಂದು ಖ್ಯಾತವಾಗಿವೆ.

ಪುರಂದರದಾಸರ ನಂತರ ಹೆಚ್ಚಿನ ಕೀರ್ತಿ ಪಾತ್ರರು ಕನಕದಾಸರು ಹಾಗೂ ವಾದಿರಾಜರು. ಅನಂತರ ಬಂದವರು ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರು ಮುಂತಾದವರು.

ಹರಿದಾಸರು ಪರಮಾತ್ಮನ ದಾಸರು. ಇಷ್ಟ ದೈವ, ಕೊಟ್ಟ ಅಂಕಿತಗಳನ್ನು ಇಟ್ಟುಕೊಂಡು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಹರಿದಾಸರ ವ್ಯಕ್ತಿತ್ತ್ವವನ್ನು ನಾವು ಎರಡು ಭಾಗವಾಗಿ ನೋಡಬಹುದು. ಮೊದಲನೆಯದು, ದಾಸರು ಮತ್ತು ಭಗವಂತ, ತಾವು ಮತ್ತು ಸುತ್ತಣ ಲೋಕ.

ಮೊದಲನೆಯದು ಭಕ್ತಿ ಸಾಧನ ಮಾರ್ಗದಲ್ಲಿ ನಡೆಯುವ ಗುರುತಾದರೆ ಎರಡಯದು ಲೋಕೋದ್ಧಾರಮಾರ್ಗ. ಈ ಎರಡರ ಗುರಿ ಸಾಧನೆಯು ಅವರ ಕೃತಿಗಳಲ್ಲಿ ಕಂಡು ಬರುತ್ತವೆ. ವ್ಯಾಸರಾಜರು "ಶ್ರೀ ಕೃಷ್ಣ ಭಕುತಿ ಸುಧೆಯ ಸವಿಗೆ ಮುಕುತಿಯು ಸರಿಯಲ್ಲ" ಎಂದಿದ್ದಾರೆ. ಭಕ್ತಿ, ವಿರಕ್ತಿ, ಶಕ್ತಿ ಈ ಮೂರು ಮುಕ್ತಿಯನ್ನು ಬಯಸುವಂತಹವರು ಹೊಂದಿರಬೇಕಾದ ಅನಿವಾರ್ಯ ಅಗತ್ಯಗಳು ಎಂದಿದ್ದಾರೆ.

ಪುರಂದರದಾಸರಂತೂ "ಕಲಿಯುಗದಲ್ಲಿ ಹರಿನಾಮದ ನೆನೆದರೆ ಕುಲಕೋಟಿಗಳುದ್ಧರಿಸುವುವು" ಎಂದು ಹೇಳಿದ್ದಾರೆ. ದಾಸರು ಭಕ್ತಿ ಮುಕುತಿಗೆ ಸೋಪಾನ ಎಂದು ಸಾರಿದ್ದಾರೆ. ಕನಕದಾಸರ ಸರಳ ಪದಗಳಲ್ಲಿಯೂ ಇದೇ ವೇದಾಂತಸಾರವನ್ನು ನಾವು ಕಾಣುತ್ತೇವೆ. ವಾದಿರಾಜ ಸ್ವಾಮಿಗಳು ಸ್ವಪ್ನಪದ, ಲಕ್ಷ್ಮೀಶೋಭಾನೆ, ಮುಂತಾದ ಅನೇಕ ಜನಪ್ರಿಯ ಪದಗಳು ಕನ್ನಡ ಸಾರಸ್ವತ ಲೋಕಕ್ಕೆ ಅಮೂಲ್ಯ ಕೊಡುಗೆಯಾಗಿವೆ.

ಆ ನಂತರದ ಪೀಳಿಗೆಯಲ್ಲಿ ಬಂದ ದಾಸವರೇಣ್ಯರಲ್ಲಿ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಅಗ್ರಗಣ್ಯರೆನಿಸಿದ್ದಾರೆ. ದಾಸಕೂಟದ ಶ್ರೇಷ್ಠತೆಗೆ ಮೆರುಗು ನೀಡಿದಂತಹ ದಾಸರ ಕೃತಿಗಳು ಅಪಾರ ಜನಪ್ರಿಯತೆ ಪಡೆದಿವೆ. ವಿಜಯದಾಸರು ತಮ್ಮ 'ಗುರು ಪುರಂದರದಾಸರೇ ನಿಮ್ಮ ಚರಣ ಕಮಲವ ನಂಬಿದೆ' ಎಂಬ ಕೃತಿಯಲ್ಲಿ ದಾಸ ಶ್ರೇಷ್ಠ ಪುರಂದರದಾಸರ ಬಗ್ಗೆ, ಭಕ್ತಿ ಆದರಗಳನ್ನು ಬಿಂಬಿಸಿ ಸ್ತುತಿಸಿದ್ದಾರೆ. ವಿಜಯದಾಸರ ಕೀರ್ತನೆಗಳ ಜೊತೆಯೇ ಅವರ ಸುಳಾದಿಗಳೂ ಅತ್ಯಮೂಲ್ಯವಾದವುಗಳು. ನರಹರಿಸರ್ವೋತ್ತಮತ್ವವನ್ನು ಸಾರಿ ಒತ್ತಿ ಹೇಳಿರುವ ದಾಸರು ಶ್ರೀ ಹರಿಯ ಸಾಕಾರ ಸ್ವರೂಪವನ್ನು, ಸರ್ವವ್ಯಾಪಕತ್ವವನ್ನು ಸಮರ್ಥಿಸುವ ಕೃತಿಗಳಯನ್ನು ರಚಿಸಿದ್ದಾರೆ. ವಿಜಯದಾಸರ ಬ್ರಹ್ಮಸ್ತುತಿ ಅಪೂರ್ವ ರಚನೆಯಾಗಿದೆ. ಹರಿದಾಸ ಸಾಹಿತ್ಯ ವಾಹಿನಿಯನ್ನು ಮತ್ತೆ ಮುಂದುವರಿಸಿದ ಅವರ ಸೇವೆ ಅತ್ಯಂತ ಘನವಾದುದು. ಅಂತೆಯೇ ಕನ್ನಡ ಭಾಷೆಯಲ್ಲಿ ಗಹನ ಶಾಸ್ತ್ರಾರ್ಥಗಳನ್ನು ತಿಳಿಸಿ ಹೇಳಿರುವ ಪ್ರಯತ್ನ ಕನ್ನಡ ಸಾರಸ್ವತ ಲೋಕದ ಅಕ್ಷಯ ಸಂಪತ್ತಾಗಿದೆ. ಅನಂತರ ಅವರ ಶಿಷ್ಯರಾದ ಗೋಪಾಲದಾಸರೂ ಅತ್ಯಂತ ಮಹಿಮಾನ್ವಿತರು. ದಾಸ ಸಾಹಿತ್ಯದ ಮೇರು ಕೃತಿಯಾದ ಹರಿಕಥಾಮೃತಸಾರದ ಕರ್ತೃ ಜಗನ್ನಾಥದಾಸರಿಗೆ ಅಪರೋಕ್ಷ ಸಿದ್ಧಿಯಿಂದ ತಮ್ಮ ಅರ್ಧ ಆಯುಷ್ಯವನ್ನೇ ಧಾರೆಯೆರೆದು ಕೊಟ್ಟು ದಾಸ ಪಂಥದ ಶ್ರೇಷ್ಠ ಪರಂಪರೆಯ ಮುಕುಟಪ್ರಾಯರೆನಿಸಿರುವ ಅವರ ಉಳಿವಿಗೆ, ಆ ಮೂಲಕ ದಾಸ ಸಾಹಿತ್ಯ, ವ್ಯಾಸತತ್ತ್ವಗಳ ಅಮೂಲ್ಯ ಕೊಡುಗೆಗೆ ಕಾರಣ ಪುರುಷರೆನಿಸಿರುವ ಕೀರ್ತಿ ಗೋಪಾಲದಾಸರದು. ದಾಸ ಸಾಹಿತ್ಯದಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಮಹಾ ವ್ಯಕ್ತಿಯೆನಿಸಿದ್ದಾರೆ. ದಾಸ ಸಾಹಿತ್ಯದಲ್ಲಿ ಕಬ್ಬಿಣದ ಕಡಲೆಯೆನಿಸಿರುವ ಕೃತಿಗಳ ಕರ್ತೃ ಜಗನ್ನಾಥದಾಸರು. ಇದಕ್ಕೆ ಕಾರಣ ಇಲ್ಲದಿಲ್ಲ. ಜಗನ್ನಾಥದಾಸರು ದಾಸ ಪಂಥವನ್ನು ಸ್ವೀಕರಿಸುವ ಮೊದಲು ಸಂಸ್ಕೃತದ ಘನ

(12 ನೇ ಪುಟ ನೋಡಿ)

# ಶ್ರೀ ವರದೇಂದ್ರರು

16ನೇ ಶತಮಾನ ಹರಿದಾಸಸಾಹಿತ್ಯದ ಸುವರ್ಣ ಸಮಯ. ವಿಶ್ವಸಾಹಿತ್ಯಗಳೆನಿಸಿದ ಶ್ರುತಿ, ಸ್ಮೃತಿ, ಪುರಾಣ, ಬ್ರಹ್ಮಸೂತ್ರಗಳು ಸಂಸ್ಕೃತಭಾಷಾಜ್ಞಾನ ಶೂನ್ಯರಾದ ಜನಸಾಮಾನ್ಯರಿಂದ ದೂರವಾಗುತ್ತಿರಲು, ಅವುಗಳಲ್ಲಿ ನಿಕ್ಷಿಪ್ತವಾದ ತತ್ತ್ವರಹಸ್ಯಗಳನ್ನು ಮನೆ ಮನೆಗಳಲ್ಲೂ, ಮನಮನಗಳಲ್ಲೂ ವ್ಯಾಪಿಸುವಂತೆ ಮಾಡಬೇಕೆಂಬ ಹಂಬಲದಿಂದ, ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರಂತಹ ಯತಿಗಳು, ಪುರಂದರದಾಸರು, ಕನಕದಾಸರು, ವೈಕುಂಠದಾಸರಂತಹ ಗೃಹಸ್ಥಾಶ್ರಮಿಗಳು ಶ್ರಮಿಸಿದ ಸುಸಮಯವದು. ಕನ್ನಡ ಕೃತಿಗಳೆಂಬ ಹರಿವಾಣಗಳಲ್ಲಿ ವೇದಾಂತತತ್ತ್ವಮೃಷ್ಟಾನ್ನ ದೊರೆತ ಸುಸಂದರ್ಭವದು. ಪುನಃ ಆ ಸುವರ್ಣಸಮಯ 18ನೇ ಶತಮಾನದಲ್ಲಿ ಸರ್ವಸಾತ್ವಿಕಜನ ಮನೋಹಾರಿಯಾಗಿ ಬಂದೊದಗಿತು. ಏಕಕಾಲದಲ್ಲಿ ವಿಜಯದಾಸರು, ಪ್ರಸನ್ನವೆಂಕಟದಾಸರು, ಗೋಪಾಲದಾಸರು, ಜಗನ್ನಾಥದಾಸರು, ಶ್ರೀದವಿಠಲದಾಸರು, ಪ್ರಾಣೇಶದಾಸರಂತಹ ಗೃಹಸ್ಥಾಶ್ರಮಿಗಳು, ಪರಂಪರಾಗತವಾಗಿ ವಿಶ್ವಸಾಹಿತ್ಯವೆಂದೆನಿಸಿಕೊಂಡ ದಾಸಸಾಹಿತ್ಯದ ಪ್ರಚಾರಕ್ಕಾಗಿ ಬದ್ಧಕಂಕಣರಾದರು. ಆ ಸಮಯದಲ್ಲೇ ಶ್ರೀರಾಘವೇಂದ್ರತೀರ್ಥರ ಪೀಠದಲ್ಲಿ ಏಳನೆಯವರಾಗಿ ಬಂದ ಶ್ರೀವರದೇಂದ್ರರು ಅದೇ ಪರಂಪರೆಯಲ್ಲಿ ಯತ್ಯಾಶ್ರಮವನ್ನು ಸ್ವೀಕರಿಸಿದ ವಿರಕ್ತಾಗ್ರೇಸರರೂ ಆದ ಶ್ರೀವ್ಯಾಸತತ್ತ್ವಜ್ಞರು, ಈ ಸಾಹಿತ್ಯದ ಪ್ರಚಾರಕ್ಕಾಗಿ ತಮ್ಮ ಸಂಪೂರ್ಣ ನೆರವನ್ನು ನೀಡುತ್ತ ಅಂದಿನ ಶ್ರೀಪಾದರಾಯರ ಸಮಯವನ್ನು ನೆನಪಿಗೆ ತಂದರು.

ವರದೇಂದ್ರರು ಕ್ರಿ. ಶ. 1761 ರಿಂದ 1785 ರವರೆಗೆ ಅಂದರೆ ಪೂರ್ಣ 24 ವರ್ಷಗಳವರೆಗೆ ಸನ್ಯಾಸದೀಕ್ಷೆಯಲ್ಲಿದ್ದು ವೇದಾಂತ ಸಾಮ್ರಾಜ್ಯವನ್ನು ಪೋಷಿಸಿದರು. ಗೌತಮ ಗೋತ್ರೋದ್ಭವರಾದ ಇವರ ಪೂರ್ವಾಶ್ರಮದ ಹೆಸರು ಬಲರಾಮಾಚಾರ್ಯರೆಂದು. ವಸುಧೀಂದ್ರರಿಂದ ಆಶ್ರಮ ಪಡೆದ ಇವರು ದೇಶದ ಎಲ್ಲಾ ಕಡೆಗೂ ಸಂಚಾರ ಮಾಡಿ ತತ್ತ್ವಪ್ರಚಾರವನ್ನು ಮಾಡಿದರು.

ಹರಿಕಥಾಮೃತಸಾರ ಪ್ರಣೇತೃಗಳೆಂದು ಪ್ರಥಿತರಾದ ಜಗನ್ನಾಥದಾಸರ ವಿದ್ಯಾಗುರುಗಳು ಇವರು. ಜಗನ್ನಾಥದಾಸರ ಪ್ರಾರ್ಥನೆಯನ್ನು ಮನ್ನಿಸಿದ ಇವರು




ಓಂಕಾರ ಹಾಗೂ ವರ್ಣಗಳ ಉತ್ಪತ್ತಿಕ್ರಮವನ್ನು ಸ್ಪಷ್ಟಪಡಿಸುವ 29 ನುಡಿಯ ಕನ್ನಡ ತಂತ್ರಸಾರವನ್ನು ರಚಿಸಿರುವರು. ಈ ವಿಷಯವನ್ನು ವರದೇಂದ್ರರೇ;

" ಬ್ಯಾಗವಾಟದ ರಂಗ ಒಲಿದ
ಶ್ರೀನರಸಿಂಹ
ಭಾಗವತರಣುಗ ಶ್ರೀಜಗನ್ನಾಥದಾಸ
ಬಾಗಿ ವಿಜ್ಞಾಪಿಸಲು ಕೈಕೊಂಡು
ಪರಮನು
ರಾಗದಲಿ ಪೇಳಿದೆವು ತಂತ್ರಸಾರ "

—ಎಂದು ಹೇಳಿ ಸ್ಪಷ್ಟಮಾಡಿರುವರು.

ಶ್ರೀಗಳವರು ಜಗನ್ನಾಥದಾಸರಂತೆ ಅವರ ಶಿಷ್ಯರಾದ ಪ್ರಾಣೇಶದಾಸರಲ್ಲೂ ಪೂರ್ಣಾನುಗ್ರಹ ಮಾಡಿದರು. ಗೋಪಾಲದಾಸರು, ಗುರುಗೋಪಾಲದಾಸರು, ವರದ ಗೋಪಾಲದಾಸರು, ಜಗನ್ನಾಥದಾಸರು, ಆಗಾಗ ಶ್ರೀವರದೇಂದ್ರರಲ್ಲಿಗೆ ಬಂದು ಅವರ ಸನ್ನಿಧಿಯಲ್ಲಿ ಕೆಲವು ದಿನಗಳನ್ನು ಕಳೆಯುತ್ತಿದ್ದರಂತೆ.

ದಕ್ಷಿಣ ದೇಶದ ನಾಮಕರೆನಿಸಿದ ಸೋಮರಾಜ, ವೀರ ವೆಂಕಟತಿರಮಲರಾಯ, ಬಸಾಲತ್‌ಜಂಗಬಹದ್ದೂರ ಮೊದಲಾದವರು, ಶ್ರೀಗಳವರ ಜ್ಞಾನ ವೈರಾಗ್ಯಗಳಿಗೂ, ನಿರಂತರ ಸಮಾಜದಲ್ಲಿ ಜ್ಞಾನ ಜ್ಯೋತಿಯನ್ನು ಬೆಳಗಿಸಲು ಶ್ರೀಗಳವರು ಮಾಡುತ್ತಿರುವ ಕಾರ್ಯಕಲಾಪಗಳಿಗೂ ಮನಸೋತವರಾಗಿ, ಅನೇಕ ಗ್ರಾಮಗಳನ್ನು ಕಾಣಿಕೆಯ ರೂಪದಲ್ಲಿ ಸಮರ್ಪಿಸಿಕೊಂಡರು-

ಒಮ್ಮೆ ವರದೇಂದ್ರರು ರಾಯಚೂರು ಜಿಲ್ಲೆಯಲ್ಲಿರುವ ಲಿಂಗಸೂಗೂರಿಗೆ ಸುಜನರ ಉದ್ಧಾರಕ್ಕಾಗಿ ನಡೆದರು. ಲಿಂಗಸೂಗೂರು ವಾಸ್ತವ್ಯರಾದ ಪ್ರಾಣೇಶದಾಸರು, ಮಹಾವೈಭವದಿಂದ ಶ್ರೀಗಳವರನ್ನು ಮನೆಗೆ ಕರೆತಂದರು. ತಮ್ಮ ಮನೆಗೆ ವರದೇಂದ್ರರು ಬಂದ ವೈಭವವನ್ನು ಪ್ರಾಣೇಶದಾಸರು ಮುಕ್ತ ಕಂಠದಿಂದ ಕೇಳಕಂಡ ರೀತಿಯಲ್ಲಿ ಹಾಡಿರುವರು.

ಹಿಂದಿನ ಸುಕರ್ಮವೇಸು
ಬಂದೊದಗಿದವೊ ವರ
ದೇಂದ್ರರಾಯ ಬಂದ ನಮ್ಮ
ಮಂದಿರಕಿಂದು ‖ ಪ ‖
ಮುತ್ತಿನ ಅಂದಣದೊಳು ಸತ್ತಿಗ
ನೆರಳಲ್ಲಿ ಪ್ರ

**ಶ್ರೀ ಕೆ. ಅಪ್ಪಣ್ಣಾಚಾರ್ಯ**

ಶಸ್ತ್ರವಾಗಿ ವೇದಶಾಸ್ತ್ರವೃತ್ತಿ ಓದುವ
ಉತ್ತಮ ಬುಧರ ಕೂಡ ಭೃತ್ಯರ
ಸಂಗಡ ಬಹು
ಹತ್ತೆಂಟು ಬಿರುದಾವಳಿ ಯುಕ್ತ
ಬಂದರು ॥ ೧ ॥
ತಂಡ ತಂಡಕ್ಕೆ ಜನರು ಹಿಂಡುಗೂಡಿ
ಫಲಗಳ
ಕೊಂಡು ಬಂದು ಮಾಡುವರು
ದಂಡಪ್ರಣಾಮ ।
ಪಂಡಿತಾಗ್ರಗಣ್ಯರು
ಭೂಮಂಡಲದೊಳಗೆ ಶ್ರೀಯೋ
ಖಂಡಲನಂತೆ ತೋರ್ವ
ಕಮಂಡಲುಧರ ॥ ೨ ॥
ಶ್ರೀಕರ ಪ್ರಾಣೇಶ ವಿಠಲನೇಕಾಂತದಿ
ಭಜಿಸುವಲ್ಲಿ
ಈ ಕುಂಭಿಣಿಯೊಳಗೀತಗೆ ಕಾಣೆನೀಡ ।
ನೀ ಕಾಯ ಬೇಕೆಂದವರ
ಶೋಕವ ಪರಿಹರಿಸಿ
ಜೋಕೆ ಮಾಡುವ
ನಿತ್ಯದೇಶಿಕ ಕುಲಪತಿ ॥ ೩ ॥

ಪ್ರಾಣೇಶದಾಸರ ಮನೆಯಲ್ಲಿ ವೈಭವದಿಂದ ಶ್ರೀಗಳವರ ಪೂಜಾಕಾರ್ಯಕ್ರಮ ನಡೆಯಿತು. ಸತ್ಯಸಂಕಲ್ಪನ ಪ್ರೇರಣೆಗನುಗುಣವಾಗಿ ಭವಿಷ್ಯತ್ತನ್ನು ಅರಿತ ವರದೇಂದ್ರರು ಪ್ರಾಣೇಶದಾಸರಿಂದ ಅವರ ಮನೆಗೆ ಸೇರಿದಂತಿರುವ ಬಣವಿಯ ದೊಡ್ಡಿಯನ್ನು ಅವರಿಂದ ಸ್ವತಃ ತಾವೇ ಕೇಳಿ ದಾನವಾಗಿ ಪಡೆದರು.

ಮುಂದೆ ಶ್ರೀಗಳವರು ಉತ್ತರದೇಶದತ್ತ ಪ್ರಯಾಣ ಬೆಳಸಿ, ಗ್ವಾಲಿಯರ್ ಸಂಸ್ಥಾನಕ್ಕೆ ಬಂದು ಅಲ್ಲಿಯ ರಾಜನಿಗೆ ತತ್ತ್ವೋಪದೇಶವನ್ನು ಮಾಡಿದರು.

ಅಲ್ಲಿಂದ ಹೊರಟು ಪೂಣೆಗೆ ದಿಗ್ವಿಜಯ ಮಾಡಿ, ಅಲ್ಲಿನ ಪೇಶ್ವೆಯಾದ ಬಾಲಾಜಿ ಬಾಜಿರಾಯನಿಂದ ಸನ್ಮಾನಿತರಾದರು. ಬಾಲಾಜಿಬಾಜೀಯರಾಯನ ಸಂಸ್ಥಾನದಲ್ಲಿದ್ದ ರಾಮಶಾಸ್ತ್ರಿಯೆಂಬ ಪಂಡಿತನೊಡನೆ ವಾದಿಸಿ ಅವನ ಅಹಂಕಾರವನ್ನು ಮುರಿದರು. ರಾಮಶಾಸ್ತ್ರಿಯು ಶ್ರೀಗಳವರ ದೈವೀ ಪಾಂಡಿತ್ಯಕ್ಕೂ, ನಿರಹಂಕಾರತೆಗೂ ಬೆರಗಾಗಿ ಶರಣಾಗತನಾಗಿ ತನ್ನ ಸುವಿಶಾಲವಾದ ಮನೆಯನ್ನೇ ಅವರ ಅಡಿದಾವರೆಗಳಿಗೆ ಅರ್ಪಿಸಿದನು.

ಪೂಣೆಯನ್ನೇ ತಮ್ಮ ವೈಕುಂಠಯಾತ್ರೆಗೆ ಯೋಗ್ಯವಾದ ಸ್ಥಾನವನ್ನಾಗಿ ಚಿಂತಿಸಿದ ವರದೇಂದ್ರರು ಶಕೆ 1787 ವಿಶ್ವಾವಸು ನಾಮ ಸಂವತ್ಸರ ಆಷಾಢಶುದ್ಧ ಷಷ್ಠಿ ಮಂಗಳವಾರದಂದು ಲಯಚಿಂತನಾಪೂರ್ವಕವಾಗಿ ವೃಂದಾವನಸ್ಥರಾದರು.

ಜನರ ಕಣ್ಣಿಗೆ ಮರೆಯಾಗಿ ಬೃಂದಾವನವನ್ನು ಪ್ರವೇಶಿಸಿದ ವರದೇಂದ್ರರು ದೈವಾಂಶರಾದ ಕಾರಣ ಮಾರನೇದಿನವೇ ಪ್ರಾಣೇಶದಾಸರ ಸ್ವಪ್ನದಲ್ಲಿ ಕಾಣಿಸಿಕೊಂಡು "ನೀವು ನಮಗೆ ದಾನ ಕೊಟ್ಟ ಹಿತ್ತಲಿನಲ್ಲಿರುವ ಬಣವಿಯ ಕೆಳಗೆ ತುಳಸೀ ವೃಕ್ಷ ರೂಪದಿಂದ ಬಂದಿರುವೆವು. ಬೃಂದಾವನವನ್ನು ನಿರ್ಮಿಸಿರಿ'' ಎಂದು ಆಜ್ಞಾಪಿಸಿದರು.

ಪ್ರಾಣೇಶದಾಸರು ಎಚ್ಚೆತ್ತು ಪುಳಕಿತಗಾತ್ರರಾಗಿ ಶಿಷ್ಯರಲ್ಲಿ ಗುರುಗಳು ತೋರಿದ ಕರುಣೆಯನ್ನು ಕೊಂಡಾಡುತ್ತ ಹಿತ್ತಲಿನಲ್ಲಿ ರಾಶಿಯಾಗಿ ಬಿದ್ದ ಹುಲ್ಲನ್ನು ತೆಗೆಯಿಸಿದರು. ಆಶ್ಚರ್ಯ ! ಕೆಳಗಡೆ ಮನುಷ್ಯನ ಎತ್ತರ ಬೆಳೆದು ನಿಂತ ತುಳಸೀ ವೃಕ್ಷ ದೃಗ್ಗೋಚರವಾಯಿತು. ಪ್ರಾಣೇಶದಾಸರಿಗೆ ಸಾಕ್ಷಾತ್ ವರದೇಂದ್ರರೇ ತಮ್ಮ ಮುಂದೆ ಬಂದು ನಿಂತಂತೆ ಆಯಿತು. ಆನಂದದಿಂದ ಹಾಡಿ ಹೊಗಳಿದರು.

ಪ್ರಾಣೇಶದಾಸರು ಭಕ್ತಬಂಧುಗಳೊಡನೆ ಸೇರಿ ಶ್ರೀಗಳವರ ಬೃಂದಾವನವನ್ನು ಪ್ರತಿಷ್ಠಿಸಿದರು, ಇಂದಿಗೂ ಸುಂದರ ಬೃಂದಾವನವು ಲಿಂಗಸೂಗೂರಿನಲ್ಲಿ ರಾರಾಜಿಸುತ್ತಿರುವುದು. ಅಂದೂ, ಇಂದೂ, ಎಂದೆಂದೂ ತಮ್ಮನ್ನು ನಂಬಿದ ಭಕ್ತರಿಗೆ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕರುಣಿಸುವ ಕರುಣಾಮಯರು ವರದೇಂದ್ರರು.

ವಂದ್ಯಾಯ ವರದೇಂದ್ರಾಯ
ಸಾಂದ್ರಾನಂದಕರಾಯಚ ।
ವಂದಾರು ಜನವೃಂದಾಯ
ಬೃಂದಾರಕ ಲತಾತ್ಮನೇ ॥

---

( 10 ನೇ ಪುಟದಿಂದ )

ವಿದ್ವಾಂಸರೆನಿಸಿದವರು. ವೇದ ಉಪನಿಷತ್‌ಗಳನ್ನು ಮೂಲ ರೂಪದಲ್ಲೇ ಅಭ್ಯಸಿಸಿ ಆಗಾಧ ಪಾಂಡಿತ್ಯವನ್ನು, ಜ್ಞಾನವನ್ನೂ ಪಡೆದ ಇವರು, ದಾಸತ್ವವನ್ನು ಸ್ವೀಕರಿಸಿದ ನಂತರ ತಮ್ಮ ಎಲ್ಲ ಸಂಸ್ಕೃತ ಜ್ಞಾನ ಪಾಂಡಿತ್ಯಗಳ ಸಾರವನ್ನು ಕನ್ನಡದ ಪದಗಳಲ್ಲಿ ಹರಿವಿದ್ದಾರೆ. ಅವರ "ಶ್ರೀಹರಿಕಥಾಮೃತಸಾರ'' ದಾಸ ಸಾಹಿತ್ಯದ ಮೇರು ಕೃತಿಯಾಗಿದೆ. ಅದರಲ್ಲಿ ಸಕಲ ಶಾಸ್ತ್ರಾರ್ಥ ಸಾರವನ್ನೂ ಬಿಂಬಿಸಿ ಸಾಮಾನ್ಯ ಜನತೆಯು ಮನಮುಟ್ಟುವಂತೆ ರಚಿಸಿದ್ದಾರೆ. ಆ ಭಾಷಾ ಗಾಂಭೀರ್ಯ, ಪಾಂಡಿತ್ಯ, ತತ್ತ್ವ ಅಪರೂಪವೆನಿಸುವಂತಹುದು. ಜೀವನ್ಮುಕ್ತಿಗೆ ಸಾಧನಾ ಮಾರ್ಗದ ದಾರಿ ದೀವಟಿಗೆಯೆನಿಸಿದೆ. ದಾಸರು ಅನೇಕ ಪದ, ಸುಳಾದಿಗಳನ್ನೂ ರಚಿಸಿದ್ದಾರೆ.

ಜಗನ್ನಾಥದಾಸರ ಸಾಹಿತ್ಯ ಕೃತಿಗಳಲ್ಲಿ ಅವರು ಹರಿಭಕ್ತ ಸಾಧಕರಾಗಿ ಜೀವನದಲ್ಲಿ ಮುಂದೆ ಮುಂದೆ ಇಟ್ಟ ಹೆಜ್ಜೆಗಳನ್ನು ನಾವು ಗುರುತಿಸಬಹುದು. ಶ್ರೇಷ್ಠ ಪಂಡಿತರಾಗಿ "ದಾಸೋಹಂ ತವ ದಾಸೋಹಂ'' ಎಂದು ಹಾಡಿದ ಶ್ರೀ ಜಗನ್ನಾಥ ದಾಸರು ಇಂದಿನ ಜನತೆಗೆ ದಾರಿ ದೀಪವಾಗಿದ್ದಾರೆ.

ಅಂತೆಯೇ ಮೋಹನದಾಸರೂ ಅತ್ಯಂತ ಸರಳವಾದ ಭಕ್ತಿ ಪೂರ್ಣವಾದ ಅನೇಕ ಕೃತಿಗಳನ್ನು ರಚಿಸಿದ್ದಾರೆ.

ಒಟ್ಟಿನಲ್ಲಿ ದಾಸ ಸಾಹಿತ್ಯ ಕನ್ನಡ ಜನರ ಮನೆಸಿ ಮನೆಗಳನ್ನು, ಮನ ಮನಗಳನ್ನು ತಟ್ಟಿ ಭಾವ ಭಕ್ತಿಗಳನ್ನು ಬದುಕಿನಲ್ಲಿ ಸಹ ಸ್ಪಂದಿಸುವಂತೆ ಮಾಡಿ, ಭವ್ಯ ಭವಿಷ್ಯದ ಮಹಾಧೀಮಂತಿಕೆಯನ್ನು ಉದ್ದೀಪನಗೊಳ್ಳುವಂತೆ ಮಾಡಿ ಕೃತಾರ್ಥವಾಯಿತು. ಶ್ರೀಪಾದರಾಯರಿಂದ ಶ್ರೀ ಜಗನ್ನಾಥದಾಸರವರೆಗಿನ ದಾಸಪರಂಪರೆ ಕನ್ನಡ ಸಾರಸ್ವತ ಲೋಕದ ಅಮೂಲ್ಯ ಭಂಡಾರದ ಸಮೃದ್ಧಿಗೆ ಮೂಲವೆನಿಸಿದೆ.



# ಮಂಕುತಿಮ್ಮನ ಜೀವನ ಧರ್ಮ

ಕನ್ನಡ ಸಾರಸ್ವತ ಪ್ರಪಂಚದ ದಿಗ್ಗಜಗಳಲ್ಲಿ ಒಬ್ಬರು ಡಾ॥ ಡಿ.ವಿ. ಗುಂಡಪ್ಪನವರು. ಕನ್ನಡ ಸಾಹಿತ್ಯದ ಕಾವ್ಯ ನಾಟಕ, ಪ್ರಬಂಧ ವಿಮರ್ಶೆ ಈ ಎಲ್ಲ ಪ್ರಕಾರಗಳಲ್ಲಿಯೂ ಬಹುಬೆಲೆ ಬಾಳತಕ್ಕ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಶ್ರೇಯಸ್ಸು ಡಾ॥ ಡಿ.ವಿ.ಜಿ. ಅವರದು. ಬಹುಭಾಷಾಶ್ರುತರೂ, ಪಂಡಿತವರೇಣ್ಯರೂ, ಪ್ರತಿಭಾವಂತರೂ ಆದ ಅವರು ಸಾಹಿತ್ಯ ವಲಯದಲ್ಲಿ ಮಾತ್ರವಲ್ಲದೆ ಸಮಾಜದ ಇತರ ಕ್ಷೇತ್ರಗಳಲ್ಲಿಯೂ ಕಾಲಿರಿಸಿ ಆದರ್ಶ ಯೋಗ್ಯವಾದ ಮಾರ್ಗವನ್ನು ಕಲ್ಪಿಸಿದವರು. ಪತ್ರಿಕೋದ್ಯಮಿಗಳಾಗಿ ಕರ್ನಾಟಕದಲ್ಲಿ ಪತ್ರಿಕಾವ್ಯವಸಾಯದ ನೆಲೆ ಬೆಲೆಗಳನ್ನು ಜನರು ಅರಿತುಕೊಳ್ಳುವಂತೆ ಮಾಡಿದರು. ರಾಜಕಾರಣದಲ್ಲಿ ಪ್ರಾಮಾಣಿಕತೆ ಹೊಣೆಗಾರಿಕೆ, ನಿಷ್ಠೆ ಮತ್ತು ಸ್ವಾತಂತ್ರ್ಯ ಇವುಗಳಿಗೆ ಮಾದರಿಯಾಗಿದ್ದರು.

ಸಾಹಿತ್ಯದಲ್ಲಿ ಅವರ ಮುಖ್ಯ ಕೃತಿಗಳನ್ನು ಗುರುತಿಸುವುದಾದರೆ 'ನಿವೇದನ' – ದೈವದಲ್ಲಿ ಅಪಾರ ನಂಬಿಕೆ ಇಟ್ಟ ಕವಿಯೊಬ್ಬರಿಂದ ಮೂಡಿಬಂದ, ಭಗವಂತನ ಸೃಷ್ಟಿವೈಚಿತ್ರ್ಯ, ಕಲೆ, ಸೌಂದರ್ಯ ಭಕ್ತಿ, ಪ್ರಕೃತಿ ಮತ್ತು ಮಾನವ ನಿರ್ಮಿತ ಅದ್ಭುತಗಳನ್ನು ಸುಂದರವಾಗಿ ಬಣ್ಣಿಸಿರುವ ಕವನ ಸಂಕಲನ. 'ಉಮರನ ಒಸಗೆ' ಮಾನವ ಮನಸ್ಸಿನ ಮಧುರ ಭಾವನೆಗಳ ಸ್ವರ್ಗೀಯ ಸೃಷ್ಟಿ. ಪ್ರೇಮದ ಅಮರತ್ವವನ್ನು ನಿರೂಪಿಸುವ ಕನ್ನಡೀಕರಣ. 'ಜೀವನ ಸೌಂದರ್ಯ ಮತ್ತು ಸಾಹಿತ್ಯ', 'ಸಾಹಿತ್ಯಶಕ್ತಿ' ಸಾಹಿತ್ಯಾಭ್ಯಾಸಿಗಳಿಗೆ ಸರ್ವಕಾಲಕ್ಕೂ ದಾರಿದೀಪವಾಗಿರುವ ಕೃತಿಗಳು. 'ಜೀವನ ಧರ್ಮ ಯೋಗ' ಒಂದು ಆಚಾರ್ಯ ಕೃತಿಯಾಗಿದ್ದು ಗೀತೆಯ ಅಮರ ಸಂದೇಶದ ವಿದ್ವತ್ ಪೂರ್ಣ ವ್ಯಾಖ್ಯಾನ. 'ಶ್ರೀರಾಮ ಪರೀಕ್ಷಣಂ' ರಾಮಾಯಣದಲ್ಲಿ ಪ್ರಾಸಂಗಿಕವಾಗಿ ಕಾಣಿಸಿಕೊಳ್ಳುವ ಪ್ರಶ್ನೆಗಳಿಗೆ ಯಥೋಚಿತ ವಿವರಣೆ. 'ಮಂಕುತಿಮ್ಮನ ಕಗ್ಗ' ಜನಜೀವನಕ್ಕೆ ಬುದ್ಧಿ ವಿವೇಚನೆಗಳ ಬೆಳಕನ್ನು ನೀಡುವ ನುಡಿ ಮುತ್ತುಗಳ ಅಮರ ಕೋಶ. ಒಂದೊಂದು ವಾಕ್ಯವೂ ವಾರಿಧಿಯಷ್ಟು ಅರ್ಥ ವಿಸ್ತಾರವುಳ್ಳದ್ದು.

ಕನ್ನಡದಲ್ಲಿ ಚಿಂತನ ಪರವಾದ ಸಾಹಿತ್ಯ ಅಪಾರವಾಗಿ ಸೃಷ್ಟಿಯಾಗಿದ್ದು ಶತಮಾನಗಳಿಂದಲೂ ಲೋಕ ಜೀವನದ ನಡವಳಿಕೆಯ ಲೋಪದೋಷಗಳನ್ನು ಗುರುತಿಸಿ ಅವುಗಳನ್ನು ತಿದ್ದಿಕೊಳ್ಳಲು ಅಮೂಲ್ಯವಾದ ಸಲಹೆಗಳನ್ನು ನೀಡಿವೆ. ಸರ್ವಜ್ಞನ ವಚನಗಳು, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಇನ್ನೂ ಮುಂತಾದ ಶಿವಶರಣರ ವಚನಗಳು, ಸೋಮೇಶ್ವರ ಶತಕ, ಹದಿ ಬದೆಯ ಧರ್ಮ ಇಂತಹ ನೀತಿ ಕಾವ್ಯಗಳು ವ್ಯಕ್ತಿ ಮತ್ತು ಸಮಾಜ ಜೀವನದಲ್ಲಿ ಅತ್ಯಂತ ಅಗತ್ಯವಾಗಿರಬೇಕಾದ ನೈತಿಕ ವಿಚಾರಗಳಿಗೆ ಅತಿ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿವೆ. ಇಂದಿಗೂ ಇವುಗಳು ಮಾನವ ಬದುಕಿಗೆ ಕಡೆಗೀಲಾಗಿದ್ದು ಪರಿಕ್ಷಾ ಪ್ರಸಂಗಗಳಲ್ಲಿ ಮಾನವನನ್ನು ಸನ್ಮಾರ್ಗಕ್ಕೆ ಸೆಳೆಯುವ ದಾರಿದೀಪಗಳಾಗಿವೆ.

---

ಚಿ. ನ. ಕೃಷ್ಣಮೂರ್ತಿ ಎಂ.ಎ,ಬಿ.ಎಡ್

---

ಹೀಗೆ ಶರಣರ ವಚನಗಳಂತೆ 'ಮಾತೇ ಜ್ಯೋತಿರ್ಲಿಂಗ'ವಾಗಿರುವ ಕೃತಿ ಡಿ. ವಿ. ಜಿ. ಅವರ 'ಮಂಕುತಿಮ್ಮನ ಕಗ್ಗ'.

ಕವಿ ತಮ್ಮ ಕಾವ್ಯಕ್ಕೆ ಒಂದು ಚೌಕಟ್ಟನ್ನು ಒದಗಿಸಲು ಪ್ರಾರಂಭದಲ್ಲಿ ಕಗ್ಗದ ಕಥೆಯನ್ನು ಹೇಳಿದ್ದಾರೆ. ಈ ಕಥೆಯೂ ಬದುಕಿನಲ್ಲಿ ಅಗತ್ಯ ಪ್ರೀತಿ ಅಂತಃಕರಣ, ನಿಸ್ವಾರ್ಥತೆ ಇವುಗಳ ಹೃದಯಂಗಮ ಚಿತ್ರಣವಾಗಿದೆ. ಬಿಂಕ ಕೊಂಕು ಒಂದೂ ಅರಿಯದ 'ಮೇಷ್ಟ್ರು' ತಿಮ್ಮಗುರು. ಯಾವ ಅಧಿಕಾರಕ್ಕೂ ಆಸೆ ಪಡೆದ ನಾಲ್ಕು ಜನ ಶಿಷ್ಯರಿಗೆ ಪಾಠಹೇಳುವ ವೃತ್ತಿ ಆತನದು. ತನ್ನ ತಂಗಿಯ ಮಗನಾದ ಸೋಮಿಯೇ ಅವನ ಜೀವನ ಸರ್ವಸ್ವ.

ಸೋಮಿಗಾಗಿ ಒಂದು ಅಮೂಲ್ಯವಾದ ಆಸ್ತಿ ಬಿಟ್ಟು ಆತ ಕೆಲಸಕ್ಕೆ ರಾಜೀನಾಮೆ ನೀಡಿ ಯಾತ್ರೆಗೆ ಹೊರಟ. ತಿಳಿದ ಸೋಮಿ ಮುಂಡುಗೆರೆಗೆ ಹೋಗಿ ಗೂಡಿನಲ್ಲಿ ಹುಡಿಕಿದಾಗ,

ಕಂಡನದರೊಳನಿತು ಬಾಳ್ಗೆ ಸಲುವ
ತತ್ತ್ವಮಥಿತವ
ಸಖರ ತೃಪ್ತಿಗೆಂದು ಸೋಮಿಯಾಯ್ದು
ಹಲವು ಬಿಂತಿಯ
ಲಿಖಿಸಿದ ಪಡಿಹೊತ್ತಗೆಯಿದು ಮಂಕುತಿಮ್ಮ
ಕಂತೆಯು

ಹೀಗೆ ಭವದಲ್ಲಿದ್ದರೂ ಬಂಧನ ಮುಕ್ತನಾದ ಚೇತನವೊಂದರ ಅನುಭಾವ ಸಾಹಿತ್ಯ 'ಮಂಕುತಿಮ್ಮನ ಕಗ್ಗ' ಜೀವನಧರ್ಮವನ್ನು ಹಲವು ದೃಷ್ಟಿಯಲ್ಲಿ ಕಂಡು ಅರ್ಥೈಸಿರುವ ಚಿಂತನಪರ ಕೃತಿ.

ಶ್ರೀ ವಿಷ್ಣು ವಿಶ್ವಾದಿ ಮೂಲ ಮಾಯಾ
ಲೋಲ ।
ದೇವ ಸರ್ವೇಶ ಪರ ಬೊಮ್ಮನೆಂದು ಜನಂ ॥
ಆವುದನು ಕಾಣದೊಡಮಳ್ತಿಯಂ
ನಂಬಿಹುದೊ ।
ಆ ವಿಚಿತ್ರಕೆ ನಮಿಸೊ–ಮಂಕುತಿಮ್ಮ ॥

ಎಂದು ಪ್ರಾರಂಭವಾಗುವ ಈ ಕಾವ್ಯ ಭಗವಂತನ ಮೇಲಿನ ಕವಿಯ ಅಚಲ ನಂಬಿಕೆಯನ್ನು ವ್ಯಕ್ತಪಡಿಸಿದೆ. ಮುಂದಿನ ಪದ್ಯಗಳಲ್ಲಿ ದೊಡ್ಡದಾದ ಮಾನವ ಜೀವನದ ಬಗ್ಗೆ, ಏನು ಜೀವನದರ್ಥ? ಏನು ಪ್ರಪಂಚಾರ್ಥ? ಜೀವರೆಂಬುದದೇನು ಕಗ್ಗತ್ತಲೆಯ ಗವಿಯೇ?, ಒಗಟೆಯೇನೀ ಸೃಷ್ಟಿ? ಬಾಳಿನರ್ಥವದೇನು? ಬದುಕಿಗಾರ್ ನಾಯಕರು; ಏಕನೊ ಅನೇಕರೋ ? ವಿಧಿಯೊ ಪೌರುಷವೊ ಧರುಮವೊ ಅಂಧಬಲವೋ? ಹೀಗೆ ಹಲವಾರು ಪ್ರಶ್ನೆಗಳನ್ನು ಹಾಕಿ ಪ್ರತಿ ಪ್ರಶ್ನೆಯನ್ನೂ ತಮ್ಮ ಜ್ಞಾನಾನುಭವಗಳಿಂದ ಯಾವ ಪೂರ್ವಗ್ರಹಗಳಿಲ್ಲದೆ ಮುಕ್ತಮನಸ್ಸಿನಿಂದ ಚರ್ಚಿಸಿದ್ದಾರೆ.

ರುಚಿ ಹೃದಯಕ್ಕೆ ಸಂಬಂಧಿಸಿದ್ದು. ಹೊರಗಿನ ದೃಷ್ಟಿಗಲ್ಲ ಎಂಬುದನ್ನು ತಿಮ್ಮಗುರು ಹೀಗೆ ಹೇಳಿದ್ದಾರೆ.

ಗಗನ ನೀಲಿಮೆಯೆನ್ನ ಕಣ್ಗೆ ಸೊಗವೀವಂತೆ ।
ಮುಗಿವ ತರಣಿಯ ರಕ್ತ ಹಿತವೆನಿಸದೇಕೋ ॥
ಸೊಗದ ಮೂಲವದೆಲ್ಲಿ ನೀಲದೊಳೊ?
ಕೆಂಪಿನೊಳೊ ।
ಬಗೆವೆನ್ನ ಮನಸಿನೊಳೊ? ಮಂಕುತಿಮ್ಮ ॥

ಕೇವಲ ತತ್ತ್ವ ಜಿಜ್ಞಾಸೆ ಬುದ್ಧಿಯ ಬೆಳವಣಿಗೆಗೆ ಕಾರಣವಾಗಬಹುದಲ್ಲದೆ ಅವುಗಳ ನಿಜವಾದ ಫಲ ದೊರೆಯಬೇಕಾದರೆ ವ್ಯಕ್ತಿಯ ಅನುಭವ

ಗಳು ಅನುಭಾವವಾಗಿ ಹೃದಯದ ಭಾವನೆಗಳನ್ನು ಅರಳಿಸಬೇಕು. ಆಗ ಮಾತ್ರ ಮನುಷ್ಯ ಪರಸತ್ವದ ಮಹಿಮೆಯನ್ನು ತಿಳಿಯಬಲ್ಲ.

ಕುರುಡನಿನ ಚಂದ್ರನನು ಕಣ್ಣಿಂದ ಕಾಣುವನೆ?
ಅರಿಯುವಂ ಸೋಂಕಿಂದೆ ಬಿಸಿಲು ತಣಿವುಗಳ
ನರನುಮಂತೆಯು ಮನಸಿನನುಭವದಿ
ಕಾಣುವನು
ಪರಸತ್ತ್ವ ಮಹಿಮೆಯನು–ಮಂಕುತಿಮ್ಮ

ಪುಸ್ತಕದ ವಿದ್ಯೆಯಿಂದಲೇ ಮನುಷ್ಯ ಬೆಳೆಯಲಾರ. ಸತ್ಯದ ಸಾಕ್ಷಾತ್‌ಕಾರಕ್ಕೆ ಮನಸ್ಸಿನ ಅರಿವು ಬೆಳೆಯಬೇಕು, ಅಂತರ್‌ದೃಷ್ಟಿ ಬೇಕು.

ಪುಸ್ತಕದಿ ದೊರೆತರಿವು ಪುಸ್ತಕದಿ ತಳೆದ ಮಣಿ।
ಚಿತ್ತದೊಳು ಬೆಳೆದರಿವು ತರು ತಳೆದ ಪುಷ್ಪ ॥
ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ।
ಶಾಸ್ತ್ರಿತನದಿಂದಲ್ಲ–ಮಂಕುತಿಮ್ಮ ॥

ಕಾಲದ ಮಹಿಮೆಯನ್ನು ತಿಳಿಸುತ್ತ ಕಾಲ ಅನಂತವೆಂದೂ ಅದರಲ್ಲಿ ಮಾನವನ ಬದುಕು ಅಲ್ಪಕಾಲದ್ದೆಂದು ತಿಳಿಸಿದ್ದಾರೆ. ಮಾನವ ಅಗತ್ಯವಾಗಿ ತಿಳಿಯಬೇಕಾದ ಗಹನ ತತ್ತ್ವದ ನಿರೂಪಣೆಯೇ ಆಗಿದೆ ಈ ಪದ್ಯ.

ಕಾಲವಕ್ಷಯದೀಪವದರ ಪಾತ್ರೆಯಪಾರ।
ಬಾಳ್ ಅದರಿನಾದೊಂದು ಕಿರುಹಣತೆ
ಮಿಣುಕು ॥
ಗಾಳಿಯಾರಿಪುದೊಂದನಿನ್ನೊಂದ
ಹೊತ್ತಿಪುದು।
ತೈಲಧಾರೆಯಖಂಡ–ಮಂಕುತಿಮ್ಮ ॥

ಈ ಜಗತ್ತು ನಿತ್ಯ ನೂತನ ಹಾಗೂ ನಿತ್ಯ ಪುರಾತನವೆಂಬುದನ್ನು ಕವಿ ತುಂಬ ಮಾರ್ಮಿಕವಾಗಿ ನುಡಿದಿದ್ದಾರೆ. ನಾವು ಬದುಕುವ ನೆಲದಲ್ಲಿ ಉಸಿರಾಡುವ ಗಾಳಿಯಲ್ಲಿ ಹಳತು ಹೊಸದು ಎಲ್ಲವೂ ಬೆರೆತಿವೆ. ರಾಮಪಾದವಿಟ್ಟ ಭೂಮಿ, ಭೀಮನುಸಿರಿದ ಗಾಳಿ, ಭಗೀರಥ ತಂದ ಗಂಗೆ ಎಲ್ಲವೂ ಪುರಾತನವಾದದ್ದೆ. ರಾಮ ರಾವಣರ ಉಸಿರು ನಮ್ಮಲ್ಲೂ ಬೆರೆತಿದೆ.

ಹೀಗಿರುವಾಗ ಭೂಮಿಯಲ್ಲಿ ಯಾವುದೂ ಹೊಸತಿಲ್ಲ.

ಧರೆಯ ನೀರ್‍ಗಾಗಸದ ನೀರಿಳಿದು ಬೆರೆವಂತೆ।
ನರನ ಪ್ರಾಕ್ತನಕೆ ನೂತನ ತತ್ತ್ವ ಬೆರೆತು ॥
ಹರಿವುದೀ ವಿಶ್ವಜೀವನಲಹರಿ ಯನವರತ।
ಚಿರಯತ್ನ ನೂತ್ನ ಜಗ–ಮಂಕುತಿಮ್ಮ ॥

ಸೃಷ್ಟಿ, ಪ್ರಕೃತಿ ಎಲ್ಲವೂ ಬದಲಾವಣೆ ಹೊಂದುತ್ತಲೇ ಇರುತ್ತದೆ. ನಿತ್ಯ ಪರಿವರ್ತನೆ ಸೃಷ್ಟಿ ಸೌಂದರ್ಯದ ರಹಸ್ಯವನ್ನರಿತಾಗಲೆ ಮಾನವ ಜಗವನಾವರಿಸಿರುವ ಮಾಯೆಯಿಂದ ಮುಕ್ತನಾಗಬಲ್ಲ.

ಋತು ಚಕ್ರ ತಿರುಗುವುದು, ಕಾಲನೆಡೆ
ಮರುಗುವುದು
ಮೃತನ ಮಣ್ಣಿಂದ ಹೊಸ ಹುಲ್ಲು
ಮೊಳೆಯುವುದು
ಕ್ಷಿತಿ ಗರ್ಭ ಧರಿಸುವಳು
ಮುತ್ತುದಿಸುವುದು ಜೀವ
ಸತತ ಕೃಷಿಯೋ ಪ್ರಕೃತಿ – ಮಂಕುತಿಮ್ಮ

ಮಾಯೆ, ವಿಧಿ ಅದೃಷ್ಟ ಇವು ಪ್ರತಿಮಾನವನನ್ನೂ ತಮ್ಮ ಕೈಗೊಂಬೆಯನ್ನಾಗಿ ಮಾಡಿಕೊಂಡು ತಮಗಿಷ್ಟ ಬಂದಂತೆ ಆಟವಾಡಿಸಿ ಕೊನೆಗೆ ಅವರನ್ನು ಪಾತಾಳಕ್ಕೆ ಅದುಮಿ ಅಟ್ಟಹಾಸ ಮಾಡುವ ದುಷ್ಟ ಶಕ್ತಿಗಳು. ಅವುಗಳ ಬಗ್ಗೆ ತಿಳುವಳಿಕೆ ನೀಡುವ ತಿಮ್ಮ ಗುರುವಿನ ಬೋಧನೆ ಸರ್ವಗ್ರಾಹ್ಯವೂ ಮನನೀಯವೂ ಆಗಿದೆ.

ಧಾತ್ರಿಯನು ಮದುವೆ
ಮಂಟಪದೊಲು ಸಿಂಗರಿಸಿ
ಕ್ಷಾತ್ರದಗ್ನಿಗಳ ನರಹೃದಯಗಳೊಳಿರಿಸಿ
ಕೃತ್ರಿಮವನೆಡೆಬಿಡದೆ ನಡೆಸಿ ನಗುವ ವಿಲಾಸಿ
ಚಿತ್ರಕಾರಿಯೊ ಮಾಯೆ — ಮಂಕುತಿಮ್ಮ

ಈ ಪ್ರಪಂಚದಲ್ಲಿ ಬದುಕುತ್ತಿರುವ ಪ್ರತಿಯೊಬ್ಬ ವ್ಯಕ್ತಿಯೂ ಋಣದ ಮೂಟೆಯನ್ನು ಹೊತ್ತಿರುತ್ತಾನೆ, ಅವನ್ನು ಬಿಡಿಸುವ ಪ್ರಯತ್ನ ನಡೆಸಿದಷ್ಟು ವಿಧಿ ತನ್ನ ಮಾಯೆಯಿಂದ ಮತ್ತಷ್ಟು ಬಲವಾಗಿ ಬಂಧಿಸುತ್ತದೆ.

ಋಣದ ಮೂಟೆಯ ಹೊರಿಸಿ,
ಪೂರ್ವಾರ್ಜಿತದ ಹುರಿಯ
ಕುಣಿಕೆಯಲಿ ನಿನ್ನ ಕೊರಳನು
ಬಿಗಿದು ವಿಧಿಯು
ತೃಣದ ಕಡ್ಡಿಯ ಮುಂದೆ
ಹಿಡಿದಾಶೆ ತೋರುತಿರೆ
ಕುಣಿವ ಗರ್ದಭ ನೀನು – ಮಂಕುತಿಮ್ಮ

ಇಂದಿನ ಮಾನವನಲ್ಲಿ ಕಾಣಬರುವ ದ್ವಿಮುಖ ವ್ಯಕ್ತಿತ್ವ ಸಮಾಜ ಜೀವನದ ನೀತಿಯ ಅಡಿಗಲ್ಲನ್ನು ಸಡಿಲಗೊಳಿಸಿದೆ. ಒಳ ಹೊರಗುಗಳಲ್ಲಿ ನಡೆನುಡಿಗಳಲ್ಲಿ ವಿರೋದಾಭಾಸ ತೋರುತ್ತಿರುವ ಮಾನವನ ಬದುಕಿನಿಂದ ಸಮಾಜ ಜೀವನಲ್ಲಿ ಬಿರುಕು ಕಾಣಿಸಿಕೊಂಡಿದೆ.

ಮೊಗ ನಾಲ್ಕು ನರನಿಗಂತೆಯೆ
ನಾರಿಗಂ ಬಗೆಯೆ
ಜಗಕೆ ಕಾಣಿಪುದೊಂದು
ಮನೆಯ ಜನಕೊಂದು

(27 ನೇ ಪುಟ ನೋಡಿ)



ಈಚೆಗೆ ಆಂಧ್ರಪ್ರದೇಶದ ಪ್ರೊದ್ದಟೂರಿನಲ್ಲಿ 14 ಲಕ್ಷ ರೂ॥ಗಳ ವೆಚ್ಚದಲ್ಲಿ ತಿ. ತಿ. ದೇ ಕಲ್ಯಾಣ ಮಂಟಪ ನಿರ್ಮಿತವಾಗಿ ಮುಜರಾಯಿ ಇಲಾಖಾಮಂತ್ರಿ ಶ್ರೀ ಪಿ. ವಿ. ಚೌದರಿ ಅವರಿಂದ ಉದ್ಘಾಟಿತವಾಯಿತು.

# ಸಂಕಲ್ಪ ಸೂರ್ಯೋದಯ ನಾಟಕ

ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪಕರಲ್ಲಿ ಶ್ರೀ ರಾಮಾನುಜರಷ್ಟೇ ಪ್ರಖ್ಯಾತರಾದವರು ಶ್ರೀವೇಂಕಟನಾಥರು ಅವರ ಅವತಾರವು ನಿರ್ದಿಷ್ಟ ಕಾರ್ಯಸಾಧನೆಗಾಗಿಯೇ ಆದುದು. ಅದಕ್ಕಾಗಿ ಅವರು ಬಹು ಉಚ್ಚಮಟ್ಟದಲ್ಲಿ ಸಿದ್ಧತೆಯನ್ನು ಪಡೆದರು. ತಮ್ಮ ಅವತಾರ ಕೃತ್ಯದ ಪೂರ್ಣತೆಗಾಗಿ ಅವರು ತಮ್ಮ ಜೀವಿತದ ನೂರೊಂದು ವರ್ಷಗಳ ಅವಧಿಯಲ್ಲಿ ೧೨೦ ಕ್ಕೂ ಮೀರಿದ ಗ್ರಂಥಗಳನ್ನು ಸಂಸ್ಕೃತ, ಪ್ರಾಕೃತ, ಮಣಿಪ್ರವಾಳ ಮತ್ತು ತಮಿಳು ಭಾಷೆಗಳಲ್ಲಿ ರಚಿಸಿದ್ದಾರೆ. ಇವುಗಳು ಬಹುಮುಖವಾದುವು. ಇವುಗಳಲ್ಲಿ ಸರ್ವಜನ ಪರಿಗ್ರಾಹ್ಯವಾದುದು ಅವರ ಕಾವ್ಯನಾಟಕಗಳು. ಅವರು ರಚಿಸಿರುವ ಸಾಂಕೇತಿಕ ನಾಟಕ "ಸಂಕಲ್ಪಸೂರ್ಯೋದಯ".

ಸಾಂಕೇತಿಕನಾಟಕವನ್ನು ರಚಿಸುವ ಸಂಪ್ರದಾಯ ಸಂಸ್ಕೃತಸಾಹಿತ್ಯದಲ್ಲಿ ಹೊಸದೇನೂ ಅಲ್ಲ. ಸಂಸ್ಕೃತಸಾಹಿತ್ಯ ಚರಿತ್ರೆಯ ಆದಿಕಾಲದಿಂದ ಕವಿಗಳು ಅಚೇತನ ಪದಾರ್ಥಗಳನ್ನೂ ಪ್ರಾಣಿಗಳನ್ನೂ ವೈಯಕ್ತಿಕ ಗುಣಗಳನ್ನೂ ಕಾವ್ಯದ ಶರೀರದಲ್ಲಿ ಪಾತ್ರಗಳನ್ನಾಗಿ ಸೇರಿಸಿ ಕಾವ್ಯನಾಟಕಗಳನ್ನು ರಚಿಸಿರುವುದು ರೂಢಿಯಲ್ಲಿದೆ. ವಿಭಿನ್ನ ದಾರ್ಶನಿಕಪಂಥಗಳ ಆವಿರ್ಭಾವವೂ ವಿವಿಧ ಮತತತ್ತ್ವಗಳ ಪ್ರಚಾರದ ಆವಶ್ಯಕತೆಯೂ ಈ ಪದ್ಧತಿಗೆ ಪ್ರಚೋದನೆಯನ್ನಿತ್ತಿವೆ. ಕ್ರಿಸ್ತ ಶಕದ ಆದಿಯಲ್ಲಿ ಅಶ್ವಘೋಷನು ಇಂತಹ ಉದ್ದೇಶದಿಂದಲೇ ಇಂತಹ ಸಾಂಕೇತಿಕ ನಾಟಕಗಳನ್ನು ರಚಿಸಿರುವುದು ವಿದಿತವಾಗಿದೆ. 'ಸನ್ನತನಾಟಕ' ವೆಂಬ ಮತ್ತೊಂದು ಹೆಸರುಳ್ಳ 'ಆಗಮಾಡಂಬರ'ವು ನೈಯಾಯಿಕನಾದ ಜಯಂತಭಟ್ಟನಿಂದ ರಚಿತವೆಂದು ಊಹಿಸಲ್ಪಟ್ಟಿದೆ. ಈ ನಾಟಕದಲ್ಲಿ ವಿವಿಧ ಪಕ್ಷಗಳ ಆಚಾರ್ಯರಾದ ಜಯಂತ, ವಿಶ್ವರೂಪ, ಧರ್ಮೋತ್ತರ, ಮಂಜೀರ ಮೊದಲಾದವರೇ ಪಾತ್ರಗಳು. ಇದೇ ಪಂಥದಲ್ಲಿ ಕೃಷ್ಣಮಿಶ್ರನು 'ಪ್ರಬೋಧ ಚಂದ್ರೋದಯ' ವೆಂಬ ನಾಟಕವನ್ನು ರಚಿಸಿದ್ದಾನೆ. ಇದರಲ್ಲಿ ಆರು ಅಂಶಗಳಿವೆ. ಇಲ್ಲಿ ಮನಸ್ಸು, ಅಹಂಕಾರ, ವಿವೇಕ, ಮಹಾಮೋಹಾದಿಗಳೇ ಪಾತ್ರಗಳು. ವಿವೇಕನಿಗೂ ಮಹಾಮೋಹನಿಗೂ ಯುದ್ಧ ನಡೆದು ಪ್ರಬೋಧಚಂದ್ರೋದಯದಿಂದ ಸಮಾಪ್ತವಾಗುವುದು. ಅದ್ವೈತ ಸಿದ್ಧಾಂತ ಪ್ರತಿಪಾದನೆಗಾಗಿ ರಚಿತವಾದ ಗ್ರಂಥವಿದು. ಮೋಕ್ಷಕ್ಕೆ ವಿಷ್ಣುಭಕ್ತಿಯೇ ಪ್ರಧಾನವೆಂದು ಪ್ರತಿಪಾದಿತವಾಗಿದೆ. ಜೈನ ಬೌದ್ಧ ಕಾಪಾಲಿಕರ ವಾದ ವಿವಾದಗಳು ಆಕರ್ಷಕವಾಗಿವೆ. ಇದು ಸುಮಾರು ಹನ್ನೊಂದನೆಯ ಶತಮಾನದ ಉತ್ತರಾರ್ಧದಲ್ಲಿ ಕೀರ್ತಿವರ್ಮನ ಸ್ನೇಹಿತನಾದ ಗೋಪಾಲನ ಆಶ್ರಯದಲ್ಲಿ ರಚಿತವಾಯಿತೆಂದು ಊಹಿಸಲ್ಪಟ್ಟಿದೆ.

'ಪ್ರಬೋಧ ಚಂದ್ರೋದಯ'ದ ತಡಿಕೆಯ ಮೇಲೆ ವಿಶಿಷ್ಟಾದ್ವೈತ ತತ್ತ್ವ ಪ್ರತಿಪಾದನೆಗಾಗಿ ವೇಂಕಟನಾಥರಿಂದ (೧೨೬೮-೧೩೭೦) 'ಸಂಕಲ್ಪಸೂರ್ಯೋದಯ' ವೆಂಬ ಪ್ರಕೃತನಾಟಕ ರಚಿತವಾಗಿದೆ. ಇದು ಹತ್ತು ಅಂಕಗಳನ್ನುಳ್ಳ ಸಾಂಕೇತಿಕನಾಟಕ. ವಿಶೇಷ ಕಾವ್ಯಮಯವಾಗಿದೆ. ಆಚಾರ್ಯರ ಆತ್ಮಚರಿತ್ರೆಗೆ ಸಂಬಂಧಪಟ್ಟ ಕೆಲವು ಉಕ್ತಿಗಳಿವೆ. ಅವರ ಅತ್ಯುತ್ತನು ಕ್ರಿಯಾಶಕ್ತಿ ಮತ್ತು ವಿದ್ಯಾವೈದುಷ್ಯಗಳ ಪ್ರತೀಕವಾಗಿದೆ. ಶಾಂತಿರಸಪ್ರಧಾನವಾದುದು. 'ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ' ಎಂಬ ಕಾಳಿದಾಸೋಕ್ತಿಯನ್ನನುಸರಿಸಿ ತತ್ತ್ವಾರ್ಥವನ್ನು ಸಾರ್ವತ್ರಿಕವಾಗಿ ದೃಷ್ಟಿಗೋಚರಮಾಡಬೇಕೆಂಬ ಅಭಿಪ್ರಾಯದಿಂದ ಈ ನಾಟಕವು ರಚಿತವಾಗಿದೆ. ಕೃಷ್ಣಮಿಶ್ರರಿಗೂ ಈ ನಾಟಕಕ್ಕೂ ಕಲ್ಪಿಸಿರುವ ಸಂಬಂಧವು ಐತಿಹಾಸಿಕದೃಷ್ಟಿಯಿಂದ ಸಮರ್ಥನೀಯವಲ್ಲ. ಈ ನಾಟಕದ ಹತ್ತು ಅಂಕಗಳೂ ಕ್ರಮವಾಗಿ ಸ್ವಪಕ್ಷಪ್ರಕಾಶ, ಪರಪಕ್ಷಪ್ರತಿಕ್ಷೇಪ, ಮುಮುಕ್ಷ್ವಪಾಯಾರಂಭ, ಕಾಮಾದಿವ್ಯೂಹ ಭೇದ, ದಂಭಾದ್ಯುಪಾಲಂಬ, ಸ್ಥಾನವಿಶೇಷ ಸಂಗ್ರಹ, ಶುಭಾಶ್ರಯ ನಿರ್ಧಾರಣ, ಮೋಹಾದಿಪರಾಜಯ, ಸಮಾಧಿಸಂಭವ, ನಿಶ್ರೇಯಸಲಾಭ–ಎಂಬ ಅಂಕಿತವುಳ್ಳದ್ದಾಗಿವೆ. ಈ ವಿಭಾಗವು ಶಾರೀರಕ ಶಾಸ್ತ್ರದ ಸ್ವಸಿದ್ಧಾಂತ ಪ್ರತಿಷ್ಠಾಪನ, ಪ್ರತಿಪಕ್ಷನಿರಾಸ, ತದುಕ್ತೋಪಾಯ ನಿಶ್ಚಯ, ತದ್ವಿರೋಧಿವಿಲಯ ಪೂರ್ವಕ ಉಪಾಯಸಂಗ್ರಹ, ಮೋಕ್ಷಪ್ರಾಪ್ತಿ ಎಂಬ ಅಯ್ದು ಪ್ರಕರಣಗಳ ಸಮೀಕರಣವೇ ಆಗಿದೆ. ಈ ಅಯ್ದು ಭಾಗಗಳೂ ದ್ವೈಗುಣ್ಯದಿಂದ ಹತ್ತು ಅಂಕಗಳಾಗಿವೆ. ಇದರಲ್ಲಿ ಆತ್ಮನು ಮೋಕ್ಷಪಡೆಯುವುದರಲ್ಲಿ ಅನುಭವಿಸುವ ಕಷ್ಟಕಾರ್ಪಣ್ಯಗಳೂ ಅದರ ಪ್ರತಿಯೊಂದು ಮೆಟ್ಟಿಲಿನಲ್ಲಿಯೂ ಭಗವಂತನ ದಯಾಮಯವಾದ ಕೃಪಾವೈಶಿಷ್ಟ್ಯವೂ ಸೊಗಸಾಗಿ ವರ್ಣಿತವಾಗಿವೆ. ಮೊದಲನೆಯ ಅಂಕದಲ್ಲಿ ಜೀವನು ಭೌತಸೌಖ್ಯವನ್ನನುಭವಿಸುವರಲ್ಲಿ ಉಂಟಾಗುವ ದುಃಖಪರಂಪರೆಗಳ ವರ್ಣನೆಯಿದೆ. ಎರಡನೆಯದರಲ್ಲಿ ಗುರುಶಿಷ್ಯರು (ಶ್ರೀರಾಮಾನುಜ ಮತ್ತು ದೇಶಿಕರು) ವಿಶಿಷ್ಟಾದ್ವೈತದ ಮೇಲ್ಮೆಯನ್ನು ದೃಢೀಕರಿಸುವರು. ೩-೪ರಲ್ಲಿ ಜೀವನಮೇಲೆ ಭೌತಪ್ರಪಂಚದ ಅಧಿಕಾರವು ಸೂಚಿತವಾಗಿದೆ. ಅಯ್ದರಲ್ಲಿ ದಂಭಾಹಂಕಾರಾದಿಗಳ ಸಂಭಾಷಣಾರೂಪವಾದ ಬಹು ಹಾಸ್ಯಯುಕ್ತವಾದ ಉಕ್ತಿಗಳಿವೆ. ಆರನೆಯ ಅಂಕದಲ್ಲಿ ಸಾರಥಿಯಾದ ತರ್ಕಸಹಿತವಾದ ವಿವೇಕನ ಆಕಾಶಯಾತ್ರೆಯ ವರ್ಣನೆಯಿದೆ. ಇಲ್ಲಿ ಅಖಂಡ ಭರತವರ್ಷದ ದಿವ್ಯದೇಶಗಳ ವರ್ಣನೆಯಿದೆ. ಎಲ್ಲಿಯೂ ಸರಿಯಾದ ಸ್ಥಾನ ಸಿಕ್ಕದ ಜೀವನು ತನ್ನ ಹೃದಯವನ್ನೇ ಮೋಕ್ಷಪ್ರಾಪ್ತಿಗೆ ಯೋಗ್ಯಸ್ಥಾನವನ್ನಾಗಿ ನಿಷ್ಕರ್ಷಿಸುವನು. ಏಳನೆಯ ಅಂಕದಲ್ಲಿ ಸತ್ಯಸೌಂದರ್ಯರೂಪವಾದ, ಮೋಕ್ಷಾಭಿಲಾಷಿಯಾದ ಸಾಧಕನು ಕೇಂದ್ರೀಕರಿಸಬಹುದಾದ, ಕೆಲವು ದೇವತೆಗಳ ಸೂಚನೆಯಿದೆ. ಎಂಟರಲ್ಲಿ ವಿವೇಕ ಮತ್ತು ಮಹಾಮೋಹರ ಯುದ್ಧವೂ ಮುಂದೆ ವಿವೇಕವಿಜಯವೂ ವರ್ಣಿತವಾಗಿವೆ. ಹತ್ತರಲ್ಲಿ ಜೀವಾತ್ಮನು ಪರಮಾತ್ಮನ ಅನುಗ್ರಹಸಂಕಲ್ಪದಿಂದ ಪರಮಪದವನ್ನು ಸೇರುವುದು ವರ್ಣಿತವಾಗಿದೆ.

ಇದರ ಕಥಾ ಶರೀರವನ್ನು ಹೀಗೆ ವರ್ಣಿಸಬಹುದು. ಇಲ್ಲಿ ದೇಹಿಗಳ ಗುಣಗಳಾದ ವಿವೇಕ, ಸುಮತಿ, ವ್ಯವಸಾಯಾದಿಗಳೂ, ಮೋಹ, ದುರ್ಮತಿ ಲೋಭಾದಿಗಳೂ ಪಾತ್ರಗಳಾಗಿ ಪರಿಕಲ್ಪಿತವಾಗಿವೆ ವಿವೇಕಾದಿಗಳು ಸಾತ್ವಿಕರು; ಮೋಹ ದುರ್ಮತ್ಯಾದಿಗಳು ತಾಮಸ ರಾಜಸ ಗುಣಗಳಿಂದ ಕೂಡಿದವರು. ವಿವೇಕನು ಇಲ್ಲಿಯ ಧೀರೋದಾತ್ತನಾಯಕ. ಪುರುಷನನ್ನು ಸಂಸಾರದಿಂದ ವಿಮೋಚನೆಮಾಡುವುದೇ ಪ್ರಯೋಜನ. ವಿವೇಕಾದಿಗಳು ಸಂಸಾರದಾವಾಗ್ನಿಯಿಂದ ಮಾಡಲ್ಪಟ್ಟ ಪುರುಷ (ಆತ್ಮ)ನನ್ನು ಉದ್ಧಾರಮಾಡಲೆತ್ನಿಸಿ ಸಮಾಧಿಯಲ್ಲಿ ಸ್ಥಾಪಿಸುವುದಕ್ಕಾಗಿ ಅವನಿಗೆ ಪ್ರಾಕೃತವಾದ ವೈಷಯಿಕ ಸುಖದಲ್ಲಿ ವೈಮುಖ್ಯವನ್ನುಂಟುಮಾಡಲು ಪ್ರಯತ್ನಿ

ಡಾ|| ಎನ್. ಅನಂತರಂಗಾಚಾರ್

ಸುತ್ತಾರೆ. ಮೋಹನಾದರೋ ದುರ್ವೃತ್ತ್ಯಾದಿಗಳ ಸಹಾಯದಿಂದ ಪುರುಷನಿಗೆ ವೈಷಯಿಕ ಭೋಗವನ್ನುಂಟುಮಾಡಿ ಅವನನ್ನು ಸಂಸಾರದಲ್ಲಿಯೇ ಇಡಲು ಪ್ರಯತ್ನಪಡುತ್ತಾನೆ. ಅಂತ್ಯದಲ್ಲಿ ವಿವೇಕನು ಮೋಹಾದಿಗಳನ್ನು ಪೂರ್ಣವಾಗಿ ಸೋಲಿಸಿ, ಪುರುಷನನ್ನು ಬ್ರಹ್ಮಸಮಾಧಿ ಪ್ರವೀಣನನ್ನಾಗಿ ಮಾಡಿ ಅದರಿಂದ ಉತ್ಪನ್ನವಾದ ಭಗವಂತನ ಅನುಗ್ರಹ ಸಂಕಲ್ಪೋದಯದಿಂದ ಪುರುಷನ ಸಂಸಾರವನ್ನು ನಿವೃತ್ತಿಗೊಳಿಸಿ ಮೋಕ್ಷಸಾಮ್ರಾಜ್ಯವನ್ನುಂಟುಮಾಡುತ್ತಾನೆ. ವಿವೇಕಾದಿಗಳು ಪುರುಷೋಪಕಾರಪರರು. ಮೋಹಾದಿಗಳು ಅವನಿಗೆ ಅಪಕಾರಪರರು. ಇವೆರಡು ಭಾಗಗಳೂ ನಾಟಕದಲ್ಲಿ ಸುವಿದಿತವಾಗಿ ಪ್ರತಿಪಾದಿತವಾಗಿವೆ. ಒಟ್ಟಿನಲ್ಲಿ ಹೇಳುವುದಾದರೆ ಈ ನಾಟಕವು ಮನುಷ್ಯನಲ್ಲಿಯೇ ಇರುವ ದೈವೀ ಮತ್ತು ಆಸುರೀ ಗುಣಗಳ ದ್ವಂದ್ವಯುದ್ಧವೂ ಕೊನೆಗೆ ದೈವೀ ಗುಣಗಳ ವಿಜಯವೂ ಆಗಿರುತ್ತದೆ. ನಾಟಕಗಳ ಪರಿಕರಗಳಾದ ಕಥಾಸಂವಿಧಾನ, ಪಾತ್ರಪರಿಕಲ್ಪವೆ, ರಸದ್ಯೋತನ ಮೊದಲಾದುವು ಶ್ಲಾಘ್ಯವಾಗಿದ್ದರೂ ನಾಟಕದಲ್ಲ ಐಕ್ಯತೆಯಿಲ್ಲವೆಂದೇ ಹೇಳಬೇಕಾಗುತ್ತದೆ.

ಈ ನಾಟಕವು ಪ್ರಬೋಧಚಂದ್ರೋದಯದ ತಡಿಕೆಯ ಮೇಲೆ ರಚಿತವಾಗಿದೆಯೆಂದು ತಿಳಿಸಿದೆಯಷ್ಟೆ. ಈ ಎರಡು ಕಥಾವಸ್ತುಗಳ ತೋಲನದಿಂದ ಇದರಲ್ಲಿ ಅನೇಕಭಾಗವು ಎರಡುನಾಟಕಗಳಿಗೆ ಸಮಾನವಾಗಿರುವುದೆಂಬಂಶವು ವಿಶದವಾಗುವುದು. ಎರಡಲ್ಲಿಯೂ ನಾಟಕದ ನಾಯಕ ಪ್ರತಿನಾಯಕರೂ ಇತರ ಪಾತ್ರಗಳೂ ಹೆಚ್ಚುಕಡಿಮೆ ಒಂದೇ ರೀತಿಯಲ್ಲಿರುತ್ತವೆ. ಕಥಾಪರಿಕಲ್ಪನೆಯೂ ಒಂದೇವಿಧ, ಎರಡಲ್ಲಿಯೂ ಪ್ರಧಾನವಾದ ರಸ ಶಾಂತರಸ. ಎರಡಲ್ಲಿಯೂ ಮೋಕ್ಷಕ್ಕೆ ವಿಷ್ಣುಭಕ್ತಿಯೇ ಸಹಾಯಕ; ಅದಕ್ಕೆ ಪ್ರಾಧಾನ್ಯ, ಅದೇ ಮೊದಲಿನಿಂದ ಕೊನೆಯವರೆಗೆ ನಾಟಕದಲ್ಲಿ ಅನುಸ್ಯೂತವಾಗಿ ಬೆಳೆದು ಬರುತ್ತದೆ. ಇದ್ದ ಅಡ್ಡಿಗಳೂ ಬಂದ ಕಷ್ಟಗಳೂ ನಿವಾರಣೆಯಾಗುವುದು ಅದರ ಪ್ರಭಾವದಿಂದಲೇ. ಆದರೂ ಮೂಲತತ್ತ್ವಗಳಲ್ಲಿಯೂ ಮೋಕ್ಷಪ್ರಾಪ್ತಿಮಾರ್ಗದಲ್ಲಿಯೂ ಮೋಕ್ಷಸ್ವರೂಪ ಮತ್ತು ಅದರ ವಿವರಣೆಗಳಲ್ಲಿಯೂ ಬಹಳ ವ್ಯತ್ಯಾಸಗಳಿವೆ. ಅವುಗಳನ್ನು ಮುಂದೆ ಕಾಣಬಹುದು.

ಪ್ರಬೋಧಚಂದ್ರೋದಯದ ಪ್ರಕಾರ ಮಾಯಯೆಂಬ ಅವಿದ್ಯಾವಿಶಿಷ್ಟನೂ, ಆ ಅವಿದ್ಯೆಗೆ ಗೋಚರನೂ ಆಶ್ರಯನೂ ಆಗಿರುವ ಶುದ್ಧಚೈತನ್ಯವೇ ಈಶ್ವರನು. ಈ ಈಶ್ವರನು ಅವಿದ್ಯೆಯಲ್ಲಿ ಪ್ರತಿಬಿಂಬಿತನಾಗಿ ಪ್ರವೃತ್ತಿಮಾರ್ಗದಲ್ಲಿ ಹೊರಟು ದುಃಖಭರಿತವಾದ ಈ ಸಂಸಾರವನ್ನು ಸುಖವೆಂಬ ಭ್ರಾಂತಿಯಿಂದ ಆಶ್ರಯಿಸಿ ಕಾಮಕ್ರೋಧಾದಿ ಬಂಧನಗಳಿಂದ ಬಂಧಿಸಲ್ಪಡುವನು. ಈ ಬಂಧನವು ನಿವೃತ್ತಿಯಾಗಬೇಕಾದರೆ ಮೂಲಕಾರಣವಾದ ಅಜ್ಞಾನವು ನಿವೃತ್ತಿಯಾಗಬೇಕು. ಅದು ಭ್ರಾಂತಿಯೆಂಬ ಅವಿದ್ಯಾರೂಪವಾದ್ದರಿಂದ ವಿದ್ಯೆ ಎಂಬ ಪರಿಶುದ್ಧಜ್ಞಾನವು ಆವಶ್ಯಕ. ಅವಿದ್ಯೆಯು ವಿಷ್ಣುಭಕ್ತಿಯ ರೂಪದಲ್ಲಿ ಪ್ರತ್ಯಕ್ಷವಾಗಲು ಪ್ರಬೋಧಚಂದ್ರೋದಯದ ಮೂಲಕ ನಿರ್ವಿಶೇಷಪರಬ್ರಹ್ಮಸಾಕ್ಷಾತ್ಕಾರವೂ, ಜೀವಬ್ರಹ್ಮೈಕಸಾಕ್ಷಾತ್ಕಾರವೂ ಆಗಿ ಮೋಕ್ಷಪ್ರಾಪ್ತಿಯಾಗುವುದು.

'ಸಂಕಲ್ಪಸೂರ್ಯೋದಯ'ದ ಮಾರ್ಗವೇ ಬೇರೆ. ಅದರ ಪ್ರಕಾರ ನಾರಾಯಣನೆಂಬ ಶಿಲ್ಪಿಯು ಪ್ರಕೃತಿಯೆಂಬ ಚಿತ್ರದ ಕಡ್ಡಿಯಿಂದ ಸತ್ವರಜಸ್ತಮೋಗುಣಗಳೆಂಬ ಬಣ್ಣಗಳನ್ನು ಚೆನ್ನಾಗಿ ಕಾಣುವಂತೆ ಬಳಿದು ಬಂದಕ್ಕೊಂದು ಸೇರದಂತೆ ಬೇರೆ ಬೇರೆಯಾಗಿ ಆಯಾಕರ್ಮಗಳಿಗೆ ವಿಭಾಗಿಸಿ ಇರಿಸಲ್ಪಟ್ಟಿರುವ ಸ್ಥಾವರಜಂಗಮಾತ್ಮಕಗಳಾದ ಶರೀರಗಳೆಂಬ ಚಿತ್ರಗಳನ್ನು ಕಲ್ಪಿಸಿರುವನು. ರತ್ನದ ಗೋಡೆಯಂತೆ ಜ್ಞಾನರೂಪನಾದ ಕಾರಣದೇಹಾದಿ ದೇಹಭೇದಗಳದ್ದಾಗ್ಯೂ ತಾನು ಭಿನ್ನನಾಗದೆ ಇರುವ ಜೀವಾತ್ಮನು ಈ ದೇಹವೆಂಬ ಚಿತ್ರವನ್ನು ಧರಿಸುವನು. ಆತನ ಪತ್ನಿಯಾದ ಬುದ್ಧಿಯು ಸ್ವಯಂಪ್ರಕಾಶಳಾದಾಗ್ಯೂ,ಸೂರ್ಯನು ಕಾಣದೇ ಹೋದಾಗ ಕಮಲಿನಿಯು ಸಂಕೋಚಗೊಳ್ಳುವಂತೆ, ತನ್ನ ಪತಿಯು ಪ್ರಕೃತಿಸಂಬಂಧವನ್ನು ವಹಿಸಿ ತನಗೆ ದೂರವಾಗಿ, ಸ್ಥಾವರವನ್ನು ಹೊಂದಿದಾಗ ಪತಿವ್ರತೆಯಂತೆ ಸಂಕುಚಿತಳಾಗಿ ಕಳೆಗುಂದಿದ ಅವನಂತೆ ತಾನೂ ಅಶಕ್ತಳಾಗಿ, ಅವನನ್ನು ಎಚ್ಚರಿಸಲು ಅಸಮರ್ಥಳಾಗುತ್ತಾಳೆ. ಈ ಜೀವಾತ್ಮನು ಅನೇಕ ಜನ್ಮಗಳಲ್ಲಿ ದುರಿತಗಳನ್ನು ಮಾಡಿರುವನು. ಆ ದುರಿತಗಳೆಲ್ಲವೂ ನಿವಾರಣೆಮಾಡುವುದಕ್ಕಾಗದಷ್ಟು ದೃಢವಾಗಿ ಅವಿಚ್ಛಿನ್ನವಾಗಿ ಇವನನ್ನು ಮೋಹಗೊಳಿಸಿ ಸಂಸಾರದಲ್ಲಿ ಸಿಕ್ಕಿಸುವುವು. ಇದರ ನಿವಾರಣೆಗೆ ನಾರಾಯಣನ ಸ್ವತಂತ್ರವಾದ ಇಚ್ಛಾಶಕ್ತಿಯೇ

(2೦ ನೇ ಪುಟ ನೋಡಿ)

# ಪರತ್ವವೋ - ಸೌಲಭ್ಯವೋ

ಭಗವಂತನು ಅನಂತಕೋಟಿಕಲ್ಯಾಣಗುಣ ಪರಿಪೂರ್ಣನೆಂದು ಜ್ಞಾನಿಗಳು ಹೇಳುವರು; ಎಂದರೆ ಆತನ ಒಂದೊಂದು ಗುಣಕ್ಕೂ ಎಲ್ಲೆಯಿಲ್ಲ ಮತ್ತು ಇಂತಹ ಗುಣಗಳಿಗೆ ಲೆಕ್ಕವೂ ಇರುವುದಿಲ್ಲ. ಇದನ್ನು ಒಬ್ಬರು ಚಮತ್ಕಾರವಾಗಿ ಹೀಗೆ ಹೇಳಿದರು.

ಸಂಖ್ಯಾತುಂ ನೈವಶಕ್ಯನ್ತೇ
ಗುಣಾದೋಷಾಶ್ಚ ಶಾರ್ಙ್ಗಿಣಃ ।
ಅನನ್ತ್ಯಾತ್ ಪ್ರಥಮೋರಾಶಿಃ
ಅಭಾವಾದೇವ ಪಶ್ಚಿಮಃ ॥

ಇದರ ಭಾವವೇನೆಂದರೆ ಶಾರ್ಙ್ಗವೆಂಬ ಧನುಸ್ಸನ್ನು ಧರಿಸಿರುವ ಪರಮಾತ್ಮನ ಗುಣಗಳೂ ಮತ್ತು ದೋಷಗಳೂ ಸಹ ಲೆಕ್ಕಕ್ಕೆ ಬಾರದಷ್ಟಿರುತ್ತವೆ. ಗುಣಗಳು ಅನಂತವಾದುದರಿಂದ ಅವುಗಳಿಗೆ ಲೆಕ್ಕವಿಲ್ಲ. ದೋಷಗಳು ಇಲ್ಲದಿರುವುದರಿಂದ ಅವಕ್ಕೂ ಲೆಕ್ಕವಿಲ್ಲ–ಸಮುದ್ರದ ದಂಡೆಯಲ್ಲಿ ಬಿದ್ದಿರುವ ಮರಳಿನ ಕಣಗಳನ್ನು ಯಾರಾದರೂ ಲೆಕ್ಕ ಮಾಡಬಲ್ಲರೆ ? ಹಾಗೆಯೇ ಸರ್ವಥಾ ಇಲ್ಲದಿರುವ ವಸ್ತುವನ್ನೂ ಲೆಕ್ಕ ಮಾಡಲಾಗುವುದಿಲ್ಲ.



ಈ ದಿವ್ಯಗುಣಗಳನ್ನು ಚಿಂತಿಸುವ ಭಕ್ತರು ಇವನ್ನು ಅನೇಕ ಗುಂಪುಗಳಾಗಿ ವಿಂಗಡಿಸುವರು. ಇವುಗಳಲ್ಲಿ ಪರತ್ವ ಮತ್ತು ಸೌಲಭ್ಯವೆಂಬುವು ಎರಡು ಮುಖ್ಯವಾದುವು. ಪರತ್ವವೆಂದರೆ ಹಿರಿಮೆಯೆಂದರ್ಥ; ಸೌಲಭ್ಯವೆಂದರೆ (ಭಕ್ತರಿಗೆ) ಸುಲಭನಾಗಿರುವಿಕೆಯೆಂದರ್ಥ. ಪರಮಾತ್ಮನು ಸಮಸ್ತ ಚೇತನಾಚೇತನಗಳಿಗಿಂತ ವಿಲಕ್ಷಣನಾಗಿ, ಅವುಗಳಿಗೆ ಸ್ವಾಮಿಯಾಗಿ ಹಿರಿಯನಾಗಿರುವನೆಂಬುದನ್ನು ನಾವು ಹೊಸದಾಗಿ ತಿಳಿಸಬೇಕಾದುದೇನಿಲ್ಲ. ಆತನ ಜ್ಞಾನ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು ಮುಂತಾದ ಎಷ್ಟೋ ಗುಣಗಳು ಅವನ ಹಿರಿಮೆಗೆ ಕಾರಣವಾಗಿರುತ್ತವೆ. ಆತನ ವಾತ್ಸಲ್ಯ, ಸೌಶೀಲ್ಯ, ಕ್ಷಮೆ, ದಯೆ ಮುಂತಾದುವು ಸೌಲಭ್ಯಕ್ಕೆ ಕಾರಣ ಅಥವಾ ಸೂಚಕವಾಗಿರುತ್ತವೆ.

ಈ ಎರಡು ಬಗೆಯ ಗುಣಗಳು ಒಂದಕ್ಕೊಂದು ವಿರುದ್ಧವಲ್ಲ, ಪೋಷಕ ಅಥವಾ ಪೂರಕವಾಗಿರುತ್ತವೆ. ಹೇಗೆಂದರೆ, ದೇವರಲ್ಲಿ ಈ ಎರಡು ಗುಣಗಳೂ ಒಂದು ಸೇರಿ ಇರದೆ, ಕೇವಲ ಪರತ್ವವೋ ಅಥವಾ ಕೇವಲ ಸೌಲಭ್ಯವೋ, ಯಾವುದಾದರೊಂದು ಮಾತ್ರ ಇದ್ದಿದ್ದರೆ, ಆಗ ಅಂತಹ ದೇವರು ನಮ್ಮ ಉಪಯೋಗಕ್ಕೇ ಬರುತ್ತಿರಲಿಲ್ಲ. ಪುರಾಣಗಳಲ್ಲಿ ಮೇರುಪರ್ವತ, ಕಲ್ಪವೃಕ್ಷ, ಕಾಮಧೇನು, ಕ್ಷೀರಸಾಗರ ಮುಂತಾದ ವಸ್ತುಗಳು, ಬಣ್ಣಿಸಲ್ಪಟ್ಟಿರುತ್ತವೆ. ಮೇರುಪರ್ವತವು ಕೇವಲ ಚಿನ್ನದಿಂದಲೇ ಆದ ಬೆಟ್ಟವಂತೆ. ಕಲ್ಪವೃಕ್ಷ ಕಾಮಧೇನುಗಳು ಬೇಡಿದ್ದನ್ನೆಲ್ಲಾ ಕೊಡುತ್ತವೆಯಂತೆ. ಕ್ಷೀರಸಾಗರದಲ್ಲಿ ಬರಿಯ ಹಾಲೇ ಹಾಲಂತೆ. ಆದರೆ ದೌರ್ಭಾಗ್ಯದಿಂದ ಈ ವಸ್ತುಗಳನ್ನು ನಾವು ಕಣ್ಣಿಂದಲೂ ಕಾಣಲಾರೆವು; ಇನ್ನು ಅವುಗಳಿಂದ ಪ್ರಯೋಜನವನ್ನು ಪಡೆಯಲಾಪೆವೆ ? ಆದುದರಿಂದ ನಮ್ಮ ಪಾಲಿಗೆ ಇವು ಇದ್ದೂ ಇಲ್ಲದಂತೆಯೇ. ಇವೇ ನಮ್ಮ ಕೈಗೆ ಎಟುಕುವಂತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ? ಇನ್ನು ಕಲ್ಲು, ಮಣ್ಣು, ಧೂಳು ಮುಂತಾದ ಅನೇಕ ವಸ್ತುಗಳು ಬಹು ಸುಲಭವಾಗಿ ದೊರೆಯುತ್ತವೆ. ನಾವು ಯಾವಾಗಲೂ ಅವನ್ನೇ ತುಳಿದುಕೊಂಡು ನಡೆಯುತ್ತೇವೆ, ಆದರೆ ಇವೆಲ್ಲಾ ಕೆಲಸಕ್ಕೆ ಬಾರದ ವಸ್ತುಗಳಾದುದರಿಂದ ನಾವು ಇವನ್ನು ಬಯಸುವುದಿಲ್ಲ. ಇವೇ ಬೆಲೆಯುಳ್ಳ ವಸ್ತುಗಳಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಹೀಗಲ್ಲದೆ ಒಂದೇ ವಸ್ತುವಿನಲ್ಲಿ ಈ ಎರಡು ಬಗೆಯ ಗುಣಗಳೂ ಇದ್ದರೆ, ನಾವು ಅದನ್ನು ಎಷ್ಟೊಂದು ಆದರಿಸುವೆವು ?

ದೇವರ ವಿಷಯದಲ್ಲೂ ಇದೇ ನ್ಯಾಯವೆಂದರಿಯಬೇಕು. ಆತನು ಪರಮಾತ್ಮನೆಂಬ ನಾಮಕ್ಕೆ ತಕ್ಕಂತೆ ಹಿರಿಯನಾಗಿ, ನಮ್ಮಂತಹ ಪಾಮರರಿಗೆ ಅವಾಙ್ಮನಸ ಗೋಚರನಾಗಿಯೇ ಇದ್ದಿದ್ದರೆ ನಾವು ಅವನ ಬಳಿ ಹೋಗಿ, ನಮ್ಮ ದುಃಖವನ್ನರಿಕೆ ಮಾಡಿಕೊಂಡು, ಬೇಕಾದ ಫಲವನ್ನು ಪಡೆಯುದೆಂತು ? ಇದಕ್ಕೆ ಪ್ರತಿಯಾಗಿ ಆತನು ಕೇವಲ ಸುಲಭನಾಗಿಯೇ ಇದ್ದಿದ್ದರೆ, ಆತನಿಂದ ನಾವು ಯಾವ ಉಪಯೋಗವನ್ನು ಹೊಂದದೆ ತಿರಸ್ಕರಿಸುತ್ತಿದ್ದೆವು. ಹೀಗಿಲ್ಲದೆ, ಈ ಎರಡು ಬಗೆಯ ಗುಣಗಳೂ ಅವನಲ್ಲಿರುವುದರಿಂದ ನಾವು ಸುಲಭವಾಗಿ ಅವನ ಬಳಿ ಸಾಗಿ ನಮ್ಮ ಕಷ್ಟಸುಖಗಳಲ್ಲಿ ಬಿನ್ನವಿಸಿ ಲಾಭವನ್ನೂ ಪಡೆದು ಕೃತಾರ್ಥರಾಗಬಲ್ಲೆವು. ಈ ಕಾರಣದಿಂದ ಭಕ್ತರು ಪರಮಾತ್ಮನ ಈ ಎರಡು ಗುಣಗಳನ್ನೂ ಕೂಡಿಸಿಯೇ ಚಿಂತಿಸುವರು.

ಕೆಲವರು ಪರಮಾತ್ಮನ ಈ ಎರಡು ಗುಣಗಳಲ್ಲಿ ಹೇಗೋ, ಯಾರ ಬಾಯಿಂದಲೋ ಒಂದನ್ನು ಮಾತ್ರ ಕೇಳಿ ತಿಳಿದುಕೊಂಡು ಮತ್ತೊಂದನ್ನು ತಿಳಿಯದೆ ಬಹಳ ಕಷ್ಟಪಡುವರು. ಅದು ಹೇಗೆಂಬುದನ್ನು ತಿರುಮಂಗೈಯಾಳ್ವಾರರೆಂಬ

ಶ್ರೀ ತಿ. ಅ. ಸಂಪತ್
ಕುಮಾರಾಚಾರ್ಯ ಎಂ.ಎ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಭಕ್ತಶಿಖಾಮಣಿಯು 'ಪೆರಿಯ ತಿರುಮೊಳಿ' ಎಂಬ ತಮ್ಮ ಸುಂದರವಾದ ಗ್ರಂಥದಲ್ಲಿ ಒಂದೆಡೆ (2–1–8) ಹೀಗೆ ಬಣ್ಣಿಸಿರುವರು– "ಶ್ರಿಯಃ ಪತಿಯಾದ ಶ್ರೀವೈಕುಂಠನಾಥನ ಶುಭಗುಣ ಗಳನ್ನು ನಾವು ಕೊಂಡಾಡಿದರೆ, ಇದನ್ನು ಕೇಳುವ ಪಾಮರರು, ಬಹಳ ದೂರದಲ್ಲಿರುವ ಆತನನ್ನು ನಾವು ಆಶ್ರಯಿಸುವುದೆಂತು ?" ಎಂದು ಕೇಳು ವರು, 'ನಮ್ಮೂರಿನ ದೇವಸ್ಥಾನದಲ್ಲೇ ಅರ್ಚಾ ರೂಪಿಯಾಗಿ ಬಿಜಯ ಮಾಡಿಸಿರುವ ದೇವರನ್ನಾ ಶ್ರಯಿಸಬಾರದೇಕೆ ?' ಎಂದು ಕೇಳಿದರೆ, ಈ ಮೂರ್ಖರು, 'ಅಜ್ಞ, ಅಶಕ್ತ ಮತ್ತು ಅಸ್ವತಂ ತ್ರವಾದ ಈ ಮೂರ್ತಿಯು ನಿಜವಾಗಿಯೂ ನಮ್ಮನ್ನು ಕಾಪಾಡಬಲ್ಲುದೆ ? ಇದು ತನ್ನನ್ನೇ ತಾನು ಕಾಪಾಡಿಕೊಳ್ಳಲಾರದಲ್ಲವೆ?' ಎನ್ನುವರು. 'ಕ್ಷೀರಾಬ್ಧಿ ನಾಥನನ್ನಾಶ್ರಯಿಸಿ ದೇವತೆಗಳು ತಮ್ಮ ಕಷ್ಟಗಳನ್ನು ನೀಗಿಕೊಂಡಿರುವರು' ಎಂದರೆ, ಅದಕ್ಕೆ 'ಅಯ್ಯೊ ! ಕ್ಷೀರಾಬ್ಧಿನಾಥನು ಎಂತಹ ಮಹಾಮಹಿಮನು, ನಾವೆಂತಹ ಅಲ್ಪರು, ನಾವು ನಿಜವಾಗಿಯೂ ಅವನನ್ನಾಶ್ರಯಿಸಲಾದೀತೆ ?' ಎನ್ನುವರು, ಹಾಗೂ ನಾವು ಬಿಡದೆ, 'ಹಾಗಾ ದರೆ ಶ್ರೀಕೃಷ್ಣನನ್ನೇ ಆಶ್ರಯಿಸಬಾರದೇಕೆ ?' ಎಂದು ನಾವು ಹೇಳಿದರೆ, ಇವರು "ಏನು, ಶ್ರೀಕೃಷ್ಣನೆ ? ಬಹುಕೀಳಾದ ಗೊಲ್ಲರ ಕುಲದಲ್ಲಿ ಹುಟ್ಟಿದ ಹುಲುಮನುಜನಾದ ಆತನು ನಿಜವಾ ಗಿಯೂ ನಮ್ಮನ್ನು ಕಾಪಾಡಬಲ್ಲನೆ ?" ಎಂದು ಕೇಳುವರು. ಒಟ್ಟಿನಲ್ಲಿ ಈ ಮೂರ್ಖರು ಹೇಗೂ ಭಗವಂತನನ್ನಾಶ್ರಯಿಸಲಿಚ್ಛಿಸರು. ಆದರೆ ನನ್ನ ಮನಸ್ಸು ಇವರ ದುರ್ವಾದಗಳನ್ನು ಲೆಕ್ಕಮಾಡದೆ ಪರಮಾತ್ಮನ ಎರಡೂ ಬಗೆಯ ಗುಣಗಳನ್ನು ಧ್ಯಾನಿಸಿ, ಅವನನ್ನು ಬಿಡದೆ ಆಶ್ರಯಿಸಿರುತ್ತದೆ."

ಇದರಿಂದ ಭಕ್ತರು ಪರಮಾತ್ಮನ ಈ ಎರಡು ಬಗೆಯ ಗುಣಗಳನ್ನೂ ಬಿಡದೆ ಚಿಂತಿಸಬೇಕೆಂ ಬುದು ತಿಳಿಯುತ್ತದೆ. ಅದರಲ್ಲೂ ರಸಿಕರಾದ ಭಕ್ತರಿಗೆ ಹೀಗೆ ಎರಡೂ ಗುಣಗಳನ್ನು ಕಲೆಸಿ ಚಿಂತಿಸುವುದರಿಂದ ವಿಶೇಷವಾದ ಆನಂದವುಂಟಾ ಗುತ್ತದೆ. ಈ ಚಿಂತನೆಯಲ್ಲಿ ಎರಡು ಬಗೆಗಳುಂಟು –ಮೊದಲು ಪರತ್ವವನ್ನು ಚಿಂತಿಸಿ, ಆದರಿಂದ ಅವನನ್ನಾಶ್ರಯಿಸುವುದೆಂತು ? ಎಂಬ ಶಂಕೆ ಯುದಿಸಿದರೆ, ಅದನ್ನು ನೀಗಿಸಲು ಸೌಲಭ್ಯವನ್ನು ಚಿಂತಿಸುವುದು ಅಥವಾ ಮೊದಲು ಸೌಲಭ್ಯವನ್ನೇ ಚಿಂತಿಸಿ, ಅದರಿಂದ ಉಂಟಾಗಬಹುದಾದ ತಿರ ಸ್ಕಾರಭಾವವನ್ನು ಹೋಗಲಾಡಿಸಲು ಆಮೇಲೆ ಪರತ್ವವನ್ನು ಚಿಂತಿಸುವುದು. ಈ ಎರಡು ಬಗೆಗಳಲ್ಲಿ ಒಂದೊಂದರಲ್ಲಿ ಒಂದೊಂದು ಬಗೆಯ ರಸವು ದೊರೆಯುವುದು.

ಗುಣಾನುಭವರಸಿಕರಾದ ಆಳ್ವಾರುಗಳಿಗೆ ಪರಮಾತ್ಮನ ಪರತ್ವಕ್ಕಿಂತ ಸೌಲಭ್ಯದ ಚಿಂತನೆಯಲ್ಲೇ ಆದರವು ಹೆಚ್ಚು. ಉಭಯವಿಭೂತಿನಾಥನಾದ ಆತನು ಎಲ್ಲರಿಗಿಂತಲೂ ಹಿರಿಯನೆಂಬುದೇನು ದೊಡ್ಡ ಮಾತು ? ಆದರೆ ಇಷ್ಟು ಹಿರಿಯನಾದ ಆತನು (ಭಕ್ತರಿಗೆ) ಸುಲಭವಾಗಿರುವುದೇ ಹೊಗಳಬೇಕಾದ ದೊಡ್ಡಸ್ತಿಕೆ. ಕೂರೇಶರೆಂಬ (ಕೂರತ್ತಾಳ್ವಾರ್) ಆಚಾರ್ಯರು ಅತಿಮಾನುಷಸ್ತವದಲ್ಲಿ ಹೀಗೆ ಹಾಡಿರುವರು

ಯಾ ಕಂಸಮುಖ್ಯ
ನೃಪಕೀಟನಿಬರ್ಹಣೋಕ್ತಾ
ಸಾ ನಿರ್ಜಿತ ತ್ರಿಜಗತಸ್ತವ ನೈವಕೀರ್ತಿಃ ।
ಗೋಪಾಲನಾದಿ ಯದಿದಂ
ಭವದೀಯಕರ್ಮೇತಿ
ಆರ್ದ್ರೀಕರೋತಿ ಹೃದಯಂ ವಿದುಷಾಂ
ತದೇತತ್ ॥

ಇದರ ತಾತ್ಪರ್ಯವೇನೆಂದರೆ – ಮೂರು ಲೋಕಗಳನ್ನೂ ಜಯಿಸಿರತಕ್ಕ ನೀವು (ಮೂರು ಲೋಕಗಳ ಸೃಷ್ಟಿ ಸ್ಥಿತಿ ಸಂಹಾರಗಳನ್ನೂ ನಡೆಸಿ ಅವನ್ನು ತನ್ನ ವಶದಲ್ಲಿಟ್ಟುಕೊಂಡಿರತಕ್ಕ) ಪರಮಾತ್ಮನ ಅವತಾರಗಳಲ್ಲಿ ಕಂಸನೇ ಮುಂತಾದ ಕೀಟಪ್ರಾಯರಾದ ರಾಜರನ್ನು ಕೊಂದಿರೆಂಬುದು ನಿಮಗೇನೂ ದೊಡ್ಡ ಕೀರ್ತಿಯನ್ನು ತರತಕ್ಕದ್ದಲ್ಲ, ಆದರೆ ಇಂತಹ ಮಹಾಮಹಿಮರಾದ ತಾವು (ಕೃಷ್ಣಾವತಾರದಲ್ಲಿ) ದನಕರುಗಳನ್ನು ಮೇಯಿಸುವುದೇ ಮೊದಲಾದ ಕಾರ್ಯಗಳನ್ನು ನಡೆಸಿದಿರೆಂಬುದೇ ಜ್ಞಾನಿಗಳಾದ ಭಕ್ತರ ಮನಸ್ಸನ್ನು ಕರಗಿಸುವುದು. ಎಂದರೆ ಆಳ್ವಾರುಗಳು ಭಗವಂತನ ಹಿರಿಮೆಯನ್ನು ಚಿಂತಿಸುವಾಗ ದೃಢಚಿತ್ತರಾಗಿರುವರು, ಆದರೆ ಸೌಲಭ್ಯವನ್ನು ಚಿಂತಿಸಲಾರಂಭಿಸಿದರೆ ಅವರ ಮನಸ್ಸು ನೀರಾಗಿ ಕರಗಿಹೋಗುವುದು. ಆದುದರಿಂದ ಈ ಸೌಲಭ್ಯವು ತಾನೇ ಕೊಂಡಾಡಬೇಕಾದ ಗುಣವು, ಪರತ್ವವಲ್ಲ. ಆದರೆ ಭಕ್ತರು ಪರತ್ವವನ್ನೂ ಏತಕ್ಕೆ ಬಗೆಬಗೆಯಾಗಿ ವರ್ಣಿಸುತ್ತಾರೆ ? ಎಂದು ಕೇಳಿದರೆ, ಅದೂ ಅವರ ಪ್ರೀತಿಪಾತ್ರನಾದ ಭಗವಂತನ ಗುಣವೆಂಬುದೇ, ಈ ಅರ್ಥವನ್ನೂ ಮೇಲ್ಕಂಡ ಕೂರೇಶರೇ ಮತ್ತೊಂದೆಡೆಯಲ್ಲಿ ಹೇಳಿರುವರು–

ಇಂಗಿತಂ ನಿಮಿಷಿತಂ ಚ ತಾವಕಮ್
ರಮ್ಯಮದ್ಭುತಮತಿ ಪ್ರಿಯಂಕರಮ್ ।
ತೇನ ಕಂಸಮುಖ ಕೀಟಶಾಸನಮ್
ಸುಂದರಾಲ್ಪಕಮಪಿ ಪ್ರಶಸ್ಯತೇ ॥

ಇದರ ತಾತ್ಪರ್ಯ-ಎಲೈ ಸುಂದರಬಾಹು ಭಗವಂತನೆ ನಿನ್ನ ಒಂದೊಂದು ಚೇಷ್ಟೆಯೂ,– ಅದು ಒಂದು ಸಣ್ಣ ಕಣ್ಣು ಸನ್ನೆಯಾಗಲಿ, ಮುಚ್ಚಿ ತೆರೆಯುವುದಾಗಲೀ, ಯಾವುದಾದರೂ ಸರಿ, ಭಕ್ತರಿಗೆ ಅತಿ ಸುಂದರ, ಅತ್ಯದ್ಭುತ ಮತ್ತು ಅತಿಪ್ರಿಯವಾಗಿರುವುದು, ಇದರಿಂದಲೇ ಅವರು ಕಂಸನೇ ಮುಂತಾದ ಕೀಟಪ್ರಾಯರಾದ ದುಷ್ಟರನ್ನು ಕೊಂದುದನ್ನೂ ಸಹ ಅದೇನೋ ದೊಡ್ಡ ಚರಿತ್ರೆಯೆಂಬಂತೆ ಹೊಗಳುತ್ತಾರೆ. ಇದರಿಂದ ಭಗವಂತನಿಂದ ಕೊಲ್ಲಲ್ಪಟ್ಟ ಮಹಾಬಲಶಾಲಿಗಳೆಂದು ಪ್ರಸಿದ್ಧಿಪಡೆದ ದುಷ್ಟರೆಲ್ಲರೂ ದೇವರ ಇದಿರಿನಲ್ಲಿ ಕೀಟಪ್ರಾಯರಾದುದರಿಂದ ಅವರನ್ನು ಕೊಲ್ಲುವುದು ಏನೂ ದೊಡ್ಡ ಕಾರ್ಯವಲ್ಲವೆಂದು ತಿಳಿಯುವುದು. ಹೀಗೆಯೇ ಅವನ ಎಲ್ಲಾಬಗೆಯ ಪರತ್ವಸೂಚಕವಾದ ಗುಣಗಳೂ ಸಹ ನಮ್ಮ ದೃಷ್ಟಿಯಿಂದ ದೊಡ್ಡವೇ ಆದರೂ, ಅವನಲ್ಲಿರುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೂ ಎಂದರೆ ಇಷ್ಟೊಂದು ಹಿರಿಯವನಾಗಿದ್ದರೂ ಆತನು ಸ್ವಲ್ಪವೂ ಗರ್ವಪಡದೆ ಭಕ್ತರ ವಿಷಯದಲ್ಲಿ ಅತ್ಯಂತ ಸುಲಭನಾಗಿಯೂ ಅವರಿಗೆ ಪರತಂತ್ರನಾಗಿಯೂ ಇರುವುದು ತಾನೇ ಅವನ ನಿಜವಾದ ಮಹಾಗುಣ, ಇದು ತಾನೇ ಕೊಂಡಾಡಬೇಕಾದುದು. ಇದಕ್ಕೆ ಮೆರುಗನ್ನು ಕೊಡುವುದು ಪರತ್ವವು. ಹೇಗೆಂದರೆ, ಈಗಾಗಲೇ ತಿಳಿಸಿದಂತೆ ಪರತ್ವವಿಲ್ಲದ ಸೌಲಭ್ಯವು ಕೆಲಸಕ್ಕೆಬಾರದುದು; ತಿರಸ್ಕಾರಕ್ಕೆ ಕಾರಣ.

ತಿರುಮಂಗೈಯಾಳ್ವಾರರು, ಈಗಾಗಲೇ ಪ್ರಸ್ತಾಪಿಸಲ್ಪಟ್ಟ, ಪೆರಿಯ ತಿರುಮೊಳಿಯೆಂಬ ತಮ್ಮ ಹಿರಿಯ ಗ್ರಂಥದ ಎರಡು ದಶಕಗಳಲ್ಲಿ (ಹತ್ತು ಪದ್ಯಗಳನ್ನುಳ್ಳ ಒಂದು ಭಾಗಕ್ಕೆ ದಶಕವೆಂದು ಹೆಸರು.) ಭಗವಂತನ ಈ ಎರಡು ಗುಣಗಳನ್ನು ಒಟ್ಟಿಗೇ ಬಣ್ಣಿಸಿರುವರು. ಇವುಗಳಲ್ಲಿ ಮೊದಲನೆಯ ದಶಕದಲ್ಲಿ (10–6) ಮೊದಲು ಪರತ್ವವನ್ನು ಅನಂತರ ಸೌಲಭ್ಯವನ್ನು ಬಣ್ಣಿಸಿರುವರು. ಇದರಲ್ಲಿ ಹತ್ತು ಪದ್ಯಗಳಿರುವುವು. ಕಡೆಯ ಪದ್ಯವು ಫಲಶ್ರುತಿ. ಉಳಿದ ಒಂಬತ್ತು ಪದ್ಯಗಳಲ್ಲಿ ಒಂದೊಂದರಲ್ಲೂ ಪರಮಾತ್ಮನ ಪರತ್ವವನ್ನು ತಿಳಿಸುವ ಕೆಲವು ಚರಿತ್ರೆಗಳನ್ನು ಹೊಗಳಿ, ಕಡೆಗೆ ಒಂದೇ ಬಗೆಯಾಗಿ ಸೌಲಭ್ಯವನ್ನು ಹಾಡಿರುವರು. ಅದು ಯಾವುದೆಂದರೆ ಶ್ರೀ ಕೃಷ್ಣಾವತಾರದಲ್ಲಿ ಆತನು ಬೆಣ್ಣೆಯನ್ನು ಕದ್ದು ತಿಂದು, ಆದರಿಂದ ಕೋಪಗೊಂಡ ತಾಯಿ ಯಶೋದೆಯಿಂದ ಕಟ್ಟಲ್ಪಟ್ಟು, ಆ ಕಟ್ಟನ್ನು ಬಿಡಿಸಿಕೊಳ್ಳಲಾರದೆ ಪೇಚಾಡಿದುದು, ಎಂದರೆ ಒಂದೊಂದು ಪದ್ಯದಲ್ಲೂ, "ಹೀಗೆ ಹೀಗೆಲ್ಲಾ ಹಿರಿಯನಾದ ಆ ಪರಮಾತ್ಮನು ಬೆಣ್ಣೆಯ ಕಳವಿನ ಪ್ರಸಂಗದಲ್ಲಿ ಒಬ್ಬ ಗೋಪಿಯಿಂದ ಕಟ್ಟಲ್ಪಟ್ಟಿದ್ದನಲ್ಲವೆ ? ಹೀಗೂ ಒಂದು ಆಶ್ಚರ್ಯವುಂಟೆ ?" ಎಂದು ಹಾಡಿ ಮುಗಿಸಿರುವರು. ಪರಮಾತ್ಮನ ಸೌಲಭ್ಯವನ್ನು ಎತ್ತಿ ತೋರುವ ಚರಿತ್ರೆಗಳಲ್ಲಿ ಈ 'ನವನೀತ ಚೌರ್ಯ ಪ್ರಯುಕ್ತದಾಮಬಂಧನ'ವೆಂಬುದು ಬಹು ಮುಖ್ಯವಾದುದು. ಇದಕ್ಕೆ ಸಮನಾದ ಪ್ರಸಂಗ ಇನ್ನೊಂದಿರದು. ಆದುದರಿಂದ ಆಳ್ವಾರುಗಳು




వినా వేంకటేశం ననాథో ననాథః
సదా వేంకటేశం స్మరామి స్మరామి



ಪ್ರೊದ್ದುಟೂರಿನಲ್ಲಿ ನಡೆದ ತಿ ತಿ. ದೇ. ಕಲ್ಯಾಣ ಮಂಟಪದ ಉದ್ಘಾಟನಾ ಸಭೆಯಲ್ಲಿ ಶ್ರೀ ಪಿ. ವಿ. ಚೌದುರಿಯವರು ಮಾತನಾಡುತ್ತಿರುವಿಕೆ.

ಸೌಲಭ್ಯವನ್ನು ಬಣ್ಣಿಸಬೇಕಾದ ಸಂದರ್ಭದಲ್ಲಿ ಮುಖ್ಯವಾಗಿ ಈ ವೃತ್ತಾಂತವನ್ನೇ ಹಾಡುವರು.

ಇನ್ನು ಈ ದಶಕದ ಒಂದೊಂದು ಪದ್ಯದ ತಾತ್ಪರ್ಯವೂ ಸಂಕ್ಷೇಪವಾಗಿ ಹೀಗಿದೆ.

(1) ವೇದೋಕ್ತವಾದ ಧರ್ಮಮಾರ್ಗವು ಸಂಕುಚಿತವಾಗಿದ್ದ ಸಮಯದಲ್ಲಿ ನರನಾರಾಯಣ ರೂಪದಿಂದ ಅವತರಿಸಿ ಶ್ರೀಮದಷ್ಟಾಕ್ಷರವೆಂಬ ಮಹಾಮಂತ್ರವನ್ನುಪದೇಶಿಸಿ, ಅದರ ಮೂಲಕ ಆ ಧರ್ಮವನ್ನು ಪುನಃ ಪ್ರಚಾರಪಡಿಸಿದವನೂ, ಮತ್ತು ಪ್ರಲಯಕಾಲದಲ್ಲಿ ಭೂಮಿ, ಸಾಗರ, ಪರ್ವತ, ಅಗ್ನಿ ಮುಂತಾದ ಎಲ್ಲವನ್ನೂ ಒಂದರ ಹಿಂದೆ ಮತ್ತೊಂದಾಗಿ ನುಂಗಿದವನೂ ಆದ ನಮ್ಮ ಸ್ವಾಮಿಯು, ಅಹ! ಈಗ ಮೊಸರು ಬೆಣ್ಣೆಗಳನ್ನು ಕದ್ದು ತಿಂದ ಅಪರಾಧಕ್ಕಾಗಿ ಗೋಪಿಯರಿಂದ ಕಟ್ಟಲ್ಪಟ್ಟಿರುವನಲ್ಲವೆ ! ಇದಕ್ಕಿಂತ ಮಿಗಿಲಾದ ಆಶ್ಚರ್ಯವೊಂದಿರುವುದೆ !

(2) ಮಂದರವೆಂಬ ಪರ್ವತವನ್ನೇ ಕಡೆಗೋಲಾಗಿ ಮಾಡಿ, ಅದನ್ನು ವಾಸುಕಿಯೆಂಬ ನಾಗದಿಂದ ಸುತ್ತಿ, ಗರ್ಜಿಸುತ್ತಿರುವ ಕ್ಷೀರಸಾಗರವನ್ನೇ ಕಡೆದ, ಮತ್ತು ಮೊಸಳೆ ತಿಮಿಂಗಿಲ ಮುಂತಾದ ಭಯಂಕರ ಜಂತುಗಳೊಡಗೂಡಿದ ಸಾಗರಗಳು, ಏಳು ಕುಲಪರ್ವತಗಳು ಮತ್ತು ಏಳು ಲೋಕಗಳನ್ನೂ ಸಹ ಅತ್ಯಾದರದೊಡನೆ ನುಂಗಿದ ಮತ್ತು ಲೀಲಾಧನುಸ್ಸಿನಿಂದ ಮಣ್ಣಿನ ಉಂಡೆಗಳನ್ನು ಬಿಟ್ಟು, ಗೂನಿಯ ಗೂನನ್ನು ಹೋಗಲಾಡಿಸಿದವನೂ ಆದ ಸರ್ವೇಶ್ವರನು, ಆಹ! ಇಂದು ಮೊಸರು ಬೆಣ್ಣೆಗಳನ್ನು ಕದ್ದು ತಿಂದು ಅಪರಾಧಕ್ಕಾಗಿ ಗೋಪಿಯರಿಂದ ಕಟ್ಟಲ್ಪಟ್ಟಿರುವನಲ್ಲವೆ! (ಈ ಪದ್ಯದಲ್ಲಿ ಇಬ್ಬರು ಗೂನಿಗಳ ವೃತ್ತಾಂತವು ಹೇಳಲ್ಪಟ್ಟಿರುತ್ತದೆ– ಶ್ರೀರಾಮಚಂದ್ರನು ಬಾಲ್ಯದಲ್ಲಿ ಚಿಕ್ಕಬಿಲ್ಲನ್ನಿಟ್ಟುಕೊಂಡು ಆಟವಾಡುತ್ತಿದ್ದನೆಂದೂ, ಆಗ ಅದರಲ್ಲಿ ಒದ್ದೆ ಮಣ್ಣಿನ ಗೋಲಿಗಳನ್ನು ಬಿಡುತ್ತಿದ್ದನೆಂದೂ, ಒಂದು ದಿವಸ ಮಂಥರೆಯೆಂಬ ಗೂನಿಯ ಗೂನಿನ ಮೇಲೆ ಆ ಗೋಲಿಗಳನ್ನು ಆಟಕ್ಕಾಗಿ ಬಿಡಲು ಅವಳು ಮುನಿಸಿಕೊಂಡು, ಆ ಸಮಯದಲ್ಲೇನೂ ಹೇಳಲೂ ಮಾಡಲೂ ಸಾಧ್ಯವಿಲ್ಲದುದರಿಂದ ಸುಮ್ಮನಿದ್ದು, ಪಟ್ಟಾಭಿಷೇಕ ಪ್ರಯತ್ನವು ನಡೆಯುವಾಗ ಕೈಕೇಯಿಗೆ ಚಾಡಿ ಹೇಳಿಕೊಟ್ಟು, ಶ್ರೀರಾಮಚಂದ್ರನಿಗೆ ರಾಜ್ಯವು ತಪ್ಪಿ ವನವಾಸವುಂಟಾಗುವಂತೆ ಮಾಡಿ ಆ ಸೇಡನ್ನು ತೀರಿಸಿಕೊಂಡಳೆಂದೂ ಹಿರಿಯರು ಹೇಳುವರು. ಗೂನನ್ನು ನೆಟ್ಟಗೆ ಮಾಡಿದುದು ಕೃಷ್ಣಾವತಾರದಲ್ಲಿ, ಕಂಸನ ಸೇವಕಿಯಾದ ಒಬ್ಬ ಗೂನಿಯು ಒಳ್ಳೆಯ ಚಂದನವನ್ನು ನೀಡಿದುದರಿಂದ ಪ್ರಸನ್ನನಾದ ಶ್ರೀಕೃಷ್ಣನು ಅವಳ ಗೂನನ್ನು ನೀಗಿಸಿ ಅನುಗ್ರಹಿಸಿದನೆಂಬುದು ಪ್ರಸಿದ್ಧವಾದ ಚರಿತ್ರವು. ಆಳ್ವಾರರು ಇವೆರಡು ಚರಿತ್ರೆಗಳನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸಿರುತ್ತಾರೆ.)

(3) ಮಹಾಬಲಶಾಲಿಗಳಾದ ಮಧುಕೈಟಭರೆಂಬ ದೈತ್ಯರಿಂದ ಪೀಡಿಸಲ್ಪಟ್ಟ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟು ಆ ದುಷ್ಟರ ಆಯುಸ್ಸನ್ನು ಸಮಾಪ್ತಗೊಳಿಸಿದ ಮತ್ತು ಒಂದು ಕಾಲದಲ್ಲಿ ಧೃಢವಾದ ಕೋರೆಹಲ್ಲುಗಳಿಂದಲೂ ಬೆಟ್ಟದಂತೆ ಬಲವಾದ ಶರೀರದಿಂದಲೂ ಕೂಡಿದ ಧನುರ್ಧರನಾದ ಹಿರಣ್ಯಾಸುರನನ್ನು ತನ್ನ ಮೊನೆಯಾದ ಉಗುರುಗಳಿಂದಲೇ ಬಗೆದು ಸೀಳಿದವನೂ ಆದ ಸರ್ವಸ್ವಾಮಿಯು, ಆಹ! ಈಗ ಮೊಸರು ಬೆಣ್ಣೆಗಳನ್ನು ಕದ್ದು ಗೋಪಿಯರಿಂದ ಕಟ್ಟಲ್ಪಟ್ಟಿರುವನಲ್ಲವೆ!

(4) ಅಸುರ ಪೀಡಿತರಾಗಿ ಶರಣಾಗತರಾದ ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ ಮಹಾಬಲಶಾಲಿಯಾದ ಹಿರಣ್ಯಾಸುರನನ್ನು ಉಗುರಿನಿಂದಲೇ ಸೀಳಿಹಾಕಿ ಪ್ರಸನ್ನನಾದವನೂ ಮತ್ತು ವಿಶೇಷವಾದ ಐಶ್ವರ್ಯದಿಂದಲೂ ಬಲದಿಂದಲೂ ಕೊಬ್ಬಿದ ಮಹಾಬಲಿಯಿಂದ ಭೂಮಿಯನ್ನು ಪಡೆಯಲೆಂದು ಅತಿ ವಿಲಕ್ಷಣವಾದ ವಾಮನ ಬ್ರಹ್ಮಚಾರಿಯ ವೇಷವನ್ನು ತಳೆದು ಕಪಟದಿಂದ ಮೂರು ಲೋಕಗಳನ್ನೂ ಅಳೆದುಕೊಂಡ ನಮ್ಮ ಲಕ್ಷ್ಮೀನಾಥನಲ್ಲವೆ ಈಗ ಮೊಸರು ಬೆಣ್ಣೆಗಳನ್ನು ಕದ್ದು ಗೋಪಿಯರಿಂದ ಕಟ್ಟಿ ಹಾಕಲ್ಪಟ್ಟಿರುವನು !

(5) ಮೊದಲು ವಾಮನ ವೇಷವನ್ನು ತಳೆದಿದ್ದು, ಕೂಡಲೇ ಆಕಾಶವನ್ನೆಲ್ಲಾ ಆಕ್ರಮಿಸುವಂತೆ ಬೆಳೆದು, ತನ್ನ ಶ್ರೀಪಾದವನ್ನು ನಿತ್ಯಸೂರಿಗಳ ಲೋಕದವರೆಗೂ ನೀಡಿದವನೂ ಮತ್ತು ತನ್ನ ಭಕ್ತರ ಎಲ್ಲಾ ಪಾಪಗಳನ್ನೂ ತೊಲಗಿಸಿ ಅವರು ಯಮನಿಗೆ ವಶರಾಗದಂತೆ ಕಾಪಾಡುವವನೂ ಸಕಲಲೋಕಸಂರಕ್ಷಕನೂ ಆದ ಭಗವಂತನು, ಅಹ! ಇಂದು ಮೊಸರು ಬೆಣ್ಣೆಗಳನ್ನು ಕದ್ದು ತಿಂದುದಕ್ಕಾಗಿ ಗೋಪಿಯರಿಂದ ಕಟ್ಟಲ್ಪಟ್ಟಿರುವನು !

(6) ಶಾಸ್ತ್ರಗಳಲ್ಲಿ ತೆಗಳಲ್ಪಟ್ಟಿರುವ ಅಲ್ಪ ಪುರುಷಾರ್ಥಗಳನ್ನು ವಾಸನೆಯೊಡನೆ ಬಿಟ್ಟು ಉತ್ತಮಪುರುಷಾರ್ಥನಾದ ಮುಕ್ತಿಯನ್ನೇ ಪಡೆಯಲೆಂದು ತನ್ನನ್ನೇ ಗತಿಯೆಂದು ನಂಬಿ ಬಂದ ಭಕ್ತರ ಪಾಪಗಳನ್ನೆಲ್ಲಾ ಹೋಗಲಾಡಿಸಿ ಅವರನ್ನು ತನ್ನ ನಿತ್ಯಕಿಂಕರರಾಗಿ ಮಾಡಿಕೊಳ್ಳುವ ಸರ್ವಸ್ವಾಮಿಯೂ ಮತ್ತು ಒಂದು ಕಾಲದಲ್ಲಿ ಬಹಳ ಗರ್ವದಿಂದ ಕೂಡಿ ತನ್ನನ್ನೆದುರಿಸಿದ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನೂ ಕೊಡಲಿಯಿಂದ ಕಡಿದು ಹಾಕಿದ ಲಕ್ಷ್ಮೀಪತಿಯಲ್ಲವೆ ಈಗ ಮೊಸರು ಬೆಣ್ಣೆಗಳನ್ನು ಕದ್ದ ಅಪರಾಧಕ್ಕಾಗಿ ಗೋಪಿಯರಿಂದ ಕಟ್ಟಿಹಾಕಲ್ಪಟ್ಟಿರುವನು!

(7) ಒಂದು ಕಾಲದಲ್ಲಿ ಜಗತ್ತೆಲ್ಲವನ್ನೂ ಸೃಷ್ಟಿಸಿ, ಶರಣಾಗತರ ಪಾಪಗಳನ್ನು ತೊಲಗಿಸಿ ಅವರಿಗೆ ತನ್ನ ನಿತ್ಯಸೇವಾ ಸಾಮ್ರಾಜ್ಯವನ್ನು ದಯೆಪಾಲಿಸುವ ಮತ್ತು ದ್ವೇಷಿಗಳಾದ ರಾವಣನೇ ಮುಂತಾದವರ ಗರ್ವವಡಗುವಂತೆ ಅವರನ್ನು ಸಂಹರಿಸಲೆಂದು ವಾನರಸೈನ್ಯದ ಸಹಾಯದಿಂದ ದೊಡ್ಡ ದೊಡ್ಡ ಬೆಟ್ಟಗಳನ್ನು ಸಾಗರದಲ್ಲಿ ಹಾಕಿ ಸೇತುವೆಯನ್ನು ಕಟ್ಟಿಸಿದ ನಮ್ಮ ಸ್ವಾಮಿಯಲ್ಲವೆ ಇಂದ ಮೊಸರು ಬೆಣ್ಣೆಗಳನ್ನು ಕದ್ದು ತಿಂದು ಗೋಪಿಯರಿಂದ ಕಟ್ಟಲ್ಪಟ್ಟಿರುವನು!

(8) ದೃಢವಾಗಿದ್ದ ಬಿಲ್ಲನ್ನು ಮುರಿದು ಸೀತಾದೇವಿಯನ್ನು ಗೆದ್ದುಕೊಂಡು, ಸ್ವಲ್ಪಕಾಲ ಅಯೋಧ್ಯೆಯಲ್ಲಿ ಯುವರಾಜನಾಗಿದ್ದು ಅನಂತರ ವನವಾಸಕ್ಕೆ ತೆರಳಿ ಅಗಾಧವಾದ ಸಾಗರವನ್ನು ಸೇತುವೆಯ ಮೂಲಕ ದಾಟಿ ಲಂಕಾಪುರಿಯನ್ನೈದಿ, ಅಲ್ಲಿಯ ಅರಸನಾದ ರಾವಣನ ಕೊಬ್ಬಿದ ತಲೆಗಳೂ ಭುಜಗಳೂ ಮತ್ತು ಕಾಲುಗಳೂ ಇವನ್ನೆಲ್ಲಾ ಕಡಿದು ಹಾಕಿದ ಪ್ರಭುವಲ್ಲವೆ ಈಗ ಮೊಸರು ಬೆಣ್ಣೆಗಳನ್ನು ತಿಂದ ಅಪರಾಧಕ್ಕಾಗಿ ಗೋಪಿಯರಿಂದ ಕಟ್ಟಿಹಾಕಲ್ಪಟ್ಟಿರುವನು!

(9) ಕುದುರೆಯ ವೇಷದಿಂದ ಬಂದ ಭಯಂಕರನಾದ ಕೇಶಿಯೆಂಬ ದುಷ್ಟ ಅಸುರನ ಬಾಯನ್ನು ಸೀಳಿಹಾಕಿದವನೂ ತನ್ನ ಸುಂದರವಾದ ಧನುಸ್ಸಿನಿಂದ ಏಳು ಸಾಲವೃಕ್ಷಗಳನ್ನೂ ಭೇದಿಸಿದವನೂ ಮತ್ತು ಬೆಟ್ಟದಂತೆ ದೊಡ್ಡ ಶರೀರವನ್ನು ಹೊಂದಿದ್ದ ಶೂರ್ಪಣಖೆಯ ಮೂಗನ್ನು ಕುಯ್ದು ಹಾಕಿದವನೂ ಆದ ಸರ್ವಸ್ವಾಮಿಯಲ್ಲವೆ ಇಂದು ಮೊಸರು ಬೆಣ್ಣೆಗಳನ್ನು ಕದ್ದು ತಿಂದು ಗೋಪಿಯರಿಂದ ಕಟ್ಟಿಹಾಕಲ್ಪಟ್ಟಿರುವನು !

(10) ಎಲ್ಲರೂ ನೋಡುತ್ತಿದ್ದರೂ ಅವರನ್ನು ಲೆಕ್ಕಿಸದೆ, ಸ್ವಲ್ಪವೂ ನಾಚಿಕೊಳ್ಳದೆ ಗೋಪಿಯರು ನಿಲಯಗಳಲ್ಲಿ ಶೇಖರಿಸಿಟ್ಟಿದ್ದ ಹಾಲು ಮೊಸರು ಬೆಣ್ಣೆ ತುಪ್ಪಗಳನ್ನು ತಿಂದು ಅದಕ್ಕಾಗಿ ಒರಳಿನೊಡನೆ ಕಟ್ಟಲ್ಪಟ್ಟ ಶ್ರೀಕೃಷ್ಣ ಪರಮಾತ್ಮನನ್ನು ಕುರಿತು, ವಿಲಕ್ಷಣ ಶ್ರೀವೈಷ್ಣವ ಶ್ರೀಸಮೃದ್ಧವಾದ ತಿರುಮಂಗೈಯೆಂಬ ದೇಶಕ್ಕೆ ಅರಸನಾದ ಶ್ರೀ ಪರಕಾಲ ಸೂರಿಯು ಹಾಡಿದ ಈ ದಶಕವನ್ನು ಅಭ್ಯಸಿಸುವ ಭಕ್ತರು ಎಂದಿಗೂ ದುಃಖವನ್ನು ಹೊಂದದೆ ಮೋಕ್ಷ ಸಾಮ್ರಾಜ್ಯವನ್ನೇ ಪಡೆಯುವರು

---

# ಕಿಶೋರ ಜಗತ್



## ಹರಿಶ್ಚಂದ್ರ

ದೇವಲೋಕದಲ್ಲಿ ಸಭೆ ಸೇರಿತ್ತು "ಭೂಲೋಕದಲ್ಲಿ ಸತ್ಯವಂತರಿದ್ದಾರೆಯೇ?" ಎಂದು ದೇವೇಂದ್ರನು ಪ್ರಶ್ನಿಸಲು ಹರಿಶ್ಚಂದ್ರನ ಬಗ್ಗೆ ವಸಿಷ್ಠರು ಹೇಳಿದರು. ಆಗ ವಿಶ್ವಾಮಿತ್ರ ಋಷಿಗಳು 'ತಾವು ಹರಿಶ್ಚಂದ್ರನ ಸತ್ಯಸಂಧತೆಯನ್ನು ಪರೀಕ್ಷಿಸುವುದಾಗಿಯೂ ಆತ ನಿಜವಾಗಿ ಸತ್ಯಸಂಧನಾಗಿದ್ದರೆ ತಮ್ಮ ತಪೋಬಲದಲ್ಲಿ ಅರ್ಧವನ್ನು ಅವನಿಗೆ ಧಾರೆಯೆರೆದು ಅವನನ್ನು ಲೋಕ ವಿಖ್ಯಾತನನ್ನಾಗಿ ಮಾಡುವುದಾಗಿಯೂ' ಹೇಳಿ ಭೂಮಿಗೆ ಬಂದರು. ಹರಿಶ್ಚಂದ್ರನಿಗೆ ಅನೇಕ ವಿಪತ್ತುಗಳನ್ನು ತಂದೊಡ್ಡಿ ಅವನ ಸತ್ಯಪರೀಕ್ಷೆ ಮಾಡಲು ಸಂಕಲ್ಪಿಸಿದರು.

ಹರಿಶ್ಚಂದ್ರ ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ಚಕ್ರವರ್ತಿ. ಅವನಿಗೆ ಚಂದ್ರಮತಿ ಎಂಬ ಪತಿಭಕ್ತೆಯೂ ಪತಿವ್ರತೆಯೂ ಆದ ಸೌಂದರ್ಯದ ಪ್ರತಿಮೂರ್ತಿಯಂತಿದ್ದ ಹೆಂಡತಿ. ಲೋಹಿತಾಶ್ವನೆಂಬ ಒಬ್ಬನೇ ಮಗ. ಹರಿಶ್ಚಂದ್ರ ಪ್ರಜೆಗಳಿಗೆ ತಂದೆಯಂತೆ ನಡೆಯುತ್ತಾ, ಋಷಿಗಳನ್ನು ಗೌರವಿಸುತ್ತ, ದೈವಭಕ್ತಿಯಿಂದ ಧರ್ಮವನ್ನು ನಂಬಿ ರಾಜ್ಯ ಪರಿಪಾಲನೆ ಮಾಡುತ್ತಿದ್ದ.

ವಿಶ್ವಾಮಿತ್ರರ ಆದೇಶದಂತೆ ಕೆಲವು ಋಷಿಗಳು ಹರಿಶ್ಚಂದ್ರನ ಬಳಿಗೆ ಹೋಗಿ "ಬಹುಸುವರ್ಣಯಾಗ" ಮಾಡುವಂತೆ ಪ್ರೇರೇಪಿಸಿದರು. ಆ ಯಾಗವನ್ನು ಮಾಡಿದ ಮೇಲೆ ಯಾರು ಏನು ಬೇಡಿದರೂ ಕೊಡಬೇಕೆನ್ನುವ ನಿಯಮವಿದೆ. ಹರಿಶ್ಚಂದ್ರನು ಕ್ರಮವಾಗಿ ಯಾಗ ಮಾಡಿ ಕೊನೆಯಲ್ಲಿ ದೀನದಲಿತರಿಗೆ ಅಪಾರ ದಾನಧರ್ಮಗಳನ್ನು ಮಾಡಿದನು. ಆಗ ಅಲ್ಲಿಗೆ ವಿಶ್ವಾಮಿತ್ರ ಮಹರ್ಷಿ ಬಂದರು. ರಾಜನು ಋಷಿಯನ್ನು ಆದರಿಸಿ, ಬಂದ ಕಾರಣವೇನೆಂದು ಕೇಳಲು 'ದೊಡ್ಡ ಆನೆಯ ಮೇಲೆ ಮನುಷ್ಯನು ನಿಂತು ಕವಡೆಯನ್ನು ಮೇಲೆ ಚಿಮ್ಮಿದರೆ ಅದು ಎಷ್ಟು ಎತ್ತರಕ್ಕೆ ಹಾರುವುದೋ ಅಷ್ಟು ಎತ್ತರದ ರಾಶಿ ಹಣವನ್ನು ಯಾಗದ ದಕ್ಷಿಣೆಯಾಗಿ ಕೊಡಬೇಕೆಂದು' ವಿಶ್ವಾಮಿತ್ರರು ಹೇಳಿದರು. ರಾಜ ಅದನ್ನು ಕೊಡಲು ಮುಂದೆ ಬಂದಾಗ "ಅದು ನಿನ್ನಲ್ಲಿಯೇ ಇರಲಿ ನನಗೆ ಬೇಕಾದಾಗ ತೆಗೆದುಕೊಳ್ಳುತ್ತೇನೆ" ಎಂದು ಹೇಳಿ ಋಷಿಗಳು ಹೊರಟು ಹೋದರು.

ತಾವು ಕೇಳಿದಷ್ಟು ಹಣವನ್ನು ಹರಿಶ್ಚಂದ್ರ ತಮಗೆ ತಕ್ಷಣ ಕೊಡಲು ಮುಂದೆ ಬಂದದ್ದರಿಂದ ವಿಶ್ವಾಮಿತ್ರರಿಗೆ ತೃಪ್ತಿಯಾಗುವ ಬದಲು ನಿರಾಸೆಯಾಯಿತು. ರಾಜನನ್ನು ಆತನ ರಾಜಧಾನಿಯಿಂದ ಹೊರಗೆ ಬರುವಂತೆ ಮಾಡಿ ಆತನಿಗೆ ಆಮಿಷ ಒಡ್ಡಿ ಅವನಿಂದ ಸುಳ್ಳುಹೇಳಿಸಲು ಉಪಾಯ ಯೋಚಿಸಿದರು. ಕ್ರೂರಪ್ರಾಣಿಗಳನ್ನು ಸೃಷ್ಟಿಸಿ ಹರಿಶ್ಚಂದ್ರನ ರಾಜಧಾನಿಯಲ್ಲಿ ಬಿಟ್ಟರು. ಅವು ಜನಗಳಿಗೆ ನಾನಾರೀತಿಯ ಉಪದ್ರವ ಕೊಡಲಾರಂಭಿಸಿದವು ಪ್ರಜೆಗಳಿಂದ ದೂರು ಬರಲು ಅವುಗಳನ್ನು ಬೇಟೆಯಾಡಲು ಹರಿಶ್ಚಂದ್ರ ಹೊರಟ. ಬೇಟೆಯಾಡುತ್ತ ಆತ ಅಡವಿಯನ್ನು ಪ್ರವೇಶಿಸಿದ. ಅಲ್ಲಿ ವಿಶ್ವಾಮಿತ್ರರ ಆಶ್ರಮ ಕಣ್ಣಿಗೆ ಕಂಡಿತು. ಆಯಾಸಗೊಂಡಿದ್ದ ರಾಜ ಸ್ವಲ್ಪ ಶ್ರಮಪರಿಹಾರ ಮಾಡಿಕೊಳ್ಳಲು ಅಲ್ಲಿದ್ದ ಮರದ ಕೆಳಗಡೆ ಕುಳಿತ. ದೂರದಿಂದ ಹರಿಶ್ಚಂದ್ರನನ್ನು ಕಂಡ ವಿಶ್ವಾಮಿತ್ರರು ಕೋಪದಿಂದ ಹೂಂಕರಿಸಿದರು. ಆ ಹೂಂಕಾರದಿಂದ ಇಬ್ಬರು ತರುಣಿಯರು ಸೃಷ್ಟಿಯಾದರು. ಹರಿಶ್ಚಂದ್ರನನ್ನು ಮರಳುಮಾಡಲು ಅವರನ್ನು ಕಳುಹಿಸಿದರು.

ಹರಿಶ್ಚಂದ್ರನ ಬಳಿಬಂದ ತರುಣಿಯರು ನೃತ್ಯಗೀತಾದಿಗಳಿಂದ ಆತನನ್ನು ಸಂತೋಷಪಡಿಸಿದರು. ರಾಜ ತಾನು ಧರಿಸಿದ್ದ ಮುತ್ತಿನ ಹಾರವನ್ನು ತೆಗೆದು ಅವರಿಗೆ ಬಹುಮಾನ ನೀಡಿದ. ಆದರೆ ಅವರು ತಮ್ಮನ್ನು ಮದುವೆಯಾಗಬೇಕೆಂದು ರಾಜನನ್ನು ಪೀಡಿಸತೊಡಗಿದರು. ಸಿಟ್ಟಿಗೆದ್ದ ರಾಜ ಅವರನ್ನು ಚಮ್ಮಟಿಗೆಯಿಂದ ಹೊಡೆದು ಓಡಿಸಿದನು. ಅವರು ವಿಶ್ವಾಮಿತ್ರನ ಬಳಿ ಬಂದು ನಡೆದ ಸಂಗತಿ ತಿಳಿಸಿದರು.

ವಿಶ್ವಾಮಿತ್ರರು ಕೋಪದಿಂದ ಕುದಿಯುತ್ತ ಹರಿಶ್ಚಂದ್ರನ ಬಳಿಬಂದು "ಎಲೈ ರಾಜನೇ, ನಿನ್ನನ್ನು ನೃತ್ಯ ಗೀತಾದಿಗಳಿಂದ ಸಂತೋಷಗೊಳಿಸಿದ ಕನ್ಯೆಯರನ್ನು ಹೊಡೆದು ಬಡಿದಿರುವೆಯಲ್ಲ. ರಾಜನಾದ ನಿನಗೆ ಇದು ಸರಿಯೇ? ಅವರನ್ನು ಮದುವೆಯಾದರೆ ಮಾತ್ರ ನಿನ್ನ ಈ ಅಪರಾಧವನ್ನು ಕ್ಷಮಿಸುತ್ತೇನೆ" ಎಂದರು. ರಾಜನು ಮುನಿಗಳಿಗೆ ವಂದಿಸಿ "ಋಷಿವರ್ಯರೇ, ನನ್ನಿಂದ ಆ ಯುವತಿಯರಿಗೆ ಆಗಿರುವ ಅನ್ಯಾಯಕ್ಕೆ ಬದಲಾಗಿ ನನ್ನ ಸಮಸ್ತ ಆಸ್ತಿಯನ್ನು ಬೇಕಾದರೆ ಕೊಡುತ್ತೇನೆ, ಆದರೆ ಅವರನ್ನು ಮದುವೆಯಾಗುವುದು ಸಾಧ್ಯವಿಲ್ಲ" ಎಂದನು.

ರಾಜ ಅಷ್ಟು ಹೇಳಿದ್ದೇ ಸಾಕೆಂದು ವಿಶ್ವಾಮಿತ್ರರು ರಾಜನನನ್ನು ಹಿಂಬಾಲಿಸಿ

**ಬಿ. ಎಸ್. ಸರೋಜ.**

# ಮಹರ್ಷಿ ವೇದವ್ಯಾಸ

ಮಹರ್ಷಿ ವೇದವ್ಯಾಸನು ದೊಡ್ಡ ವಿದ್ವಾಂಸನೂ, ಪಂಡಿತನೂ ಆಗಿದ್ದ. ಈತನಿಗಿಂತ ಮೊದಲು ಋಷಿ ಮುನಿಗಳು ವೇದ ಮಂತ್ರಗಳನ್ನು ಬಾಯಿಪಾಠ ಮಾಡುತ್ತಿದ್ದರು. ವೇದವ್ಯಾಸನು ಮೊದಲನೆಯದಾಗಿ ಅವುಗಳನ್ನು ಬರೆದು ಅವುಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ. ವೇದಗಳಲ್ಲದೆ ಪುರಾಣಗಳನ್ನೂ ವೇದವ್ಯಾಸ ರಚಿಸಿದ. ವೇದಾಂತ ಶಾಸ್ತ್ರವೆಂಬ ಹಿಂದೂ ಶಾಸ್ತ್ರವೂ ಆತನ ಹೆಸರಿನಲ್ಲಿದೆ.

ಮಹಾಭಾರತವೆಂಬ ಗ್ರಂಥದಿಂದಾಗಿ ನಾವು ಹೆಚ್ಚಾಗಿ ವೇದವ್ಯಾಸನನ್ನು ತಿಳಿದಿದ್ದೇವೆ. ಮಹಾಭಾರತದಲ್ಲಿ ಕೌರವ-ಪಾಂಡವರ ಕಥೆಯಿದೆ. ವೇದಶಾಸ್ತ್ರಗಳ ಜ್ಞಾನವಿದೆ. ವಿಜ್ಞಾನದ ವಿವರಣೆಯಿದೆ. ಪುರಾಣದ ಕತೆಗಳೂ ಇವೆ. ಆ ಕಾಲದ ಸಮಾಜ, ಧರ್ಮ ಹಾಗೂ ದೇಶದ ಪೂರ್ಣ ಇತಿಹಾಸವೇ ಆ ಗ್ರಂಥದಲ್ಲಿದೆ. ಮಾತ್ರವಲ್ಲದೆ ವೇದವ್ಯಾಸ ಇನ್ನೂ ಹಲವು ವಿದ್ಯೆಗಳನ್ನು ಅರಿತಿದ್ದ. ಒಂದೆಡೆ ಕುಳಿತು ದೂರದ ಮಾತುಗಳನ್ನು ಕೇಳುವುದು, ದೂರದೂರದಲ್ಲಿ ನಡೆದುದನ್ನು ಕುಳಿತಲ್ಲಿಂದಲೇ ನೋಡುವುದು ಕೂಡ ಆತನಿಗೆ ತಿಳಿದಿತ್ತು. ಕೌರವ ಪಾಂಡವರಲ್ಲಿ ಯುದ್ಧ ನಡೆಯುತ್ತಿದ್ದಾಗ ಸಂಜಯ, ಹಸ್ತಿನಾಪುರದಲ್ಲೇ ಕುಳಿತು ಯುದ್ಧದ ಕಥೆ ಧೃತರಾಷ್ಟ್ರನಿಗೆ ಹೇಳುತ್ತಿದ್ದ. ಈ ವಿದ್ಯೆಯನ್ನು ಸಂಜಯನಿಗೆ ವೇದವ್ಯಾಸನೇ ಕಲಿಸಿದ. ಆಗ ನಮಗೆ ಹೀಗೆ ಕುಳಿತಲ್ಲೇ ದೂರದಲ್ಲಿ ನಡೆದ ಕತೆಯನ್ನು ಹೇಳುವುದು ಸತ್ಯವೆಂದು ನಂಬಿಕೆಯಾಗುತ್ತಿರಲಿಲ್ಲ. ಆದರೆ ವಿಜ್ಞಾನವು ಈಗ ಇದನ್ನು ಸತ್ಯವೆಂದು ಸಿದ್ಧಪಡಿಸಿದೆ. ಆಗ ವಿಜ್ಞಾನವು ಇಷ್ಟು ಅಭಿವೃದಿ ಹೊಂದಿದ್ದಿರಲೂ ಬಹುದು.

ವ್ಯಾಸನ ಜನ್ಮವಾದದ್ದು ಮಹರ್ಷಿ ವಶಿಷ್ಠನ ಕಾಲದಲ್ಲಿ. ವಶಿಷ್ಠನ ಮಗ ಶಕ್ತಿ. ಶಕ್ತಿಯ ಮಗ ಪರಾಶರ. ಆತನ ಮಗ ಮಹರ್ಷಿ ವೇದವ್ಯಾಸ. ಇವನ ತಾಯಿಯ ಹೆಸರು ಸತ್ಯವತಿ. ನಂತರಕುರುಕುಲದ ರಾಜ ಶಂತನುವನ್ನು ವಿವಾಹವಾದಳು. ಈ ಕುಲದಲ್ಲೇ ಕೌರವ-ಪಾಂಡವರ ಜನ್ಮವಾಯಿತು. ಈ ರೀತಿ ವೇದವ್ಯಾಸ – ಕೌರವ – ಪಾಂಡವರಿಗೆ ಅಜ್ಜನಾಗಿದ್ದ. ಎಲ್ಲರಲ್ಲೂ ಸಮಾನವಾದ ಪ್ರೀತಿಯಿದ್ದರೂ, ಪಾಂಡವರಲ್ಲಿ ವೇದವ್ಯಾಸನಿಗೆ ಹೆಚ್ಚಿನ ಪ್ರೇಮ. ಕಾರಣ, ಪಾಂಡವರು ಧರ್ಮಾತ್ಮರೆಂದು ಆತ ತಿಳಿದಿದ್ದ. ಆತನ ಹೇಳಿಕೆಯಿಂದಲೇ ಪಾಂಡವರು ದ್ರೌಪದೀ ಸ್ವಯಂವರಕ್ಕೆ ಒಪ್ಪಿದುದು. ಆತನ ಹೇಳಿಕೆಯಿಂದಲೇ ಯುಧಿಷ್ಠಿರ ರಾಜಸೂಯ ಯಾಗ ಮಾಡಿದ. ಆತನ ಹೇಳಿಕೆಯಂತೆಯೇ ಭೀಮ, ನಕುಲ, ಸಹದೇವರುಗಳು ನಾಲ್ಕೂ ಕಡೆ ರಾಜರುಗಳನ್ನು ಗೆಲ್ಲಲು ಹೋಗಿದ್ದರು. ಪಾಂಡವರಿಗೆ ವನವಾಸ ಪ್ರಾಪ್ತವಾದಾಗ ವೇದವ್ಯಾಸನೇ ಅವರಿಗೆ ಸಹಾಯ ಮಾಡಿದ. ತನ್ನ ಮಕ್ಕಳು ಸತ್ತಾಗ ಗಾಂಧಾರಿಯು ಪಾಂಡವರಿಗೆ ಶಾಪ ಕೊಡಬೇಕೆಂದಿದ್ದಾಗ ವೇದವ್ಯಾಸನೇ ತಡೆದುದು.

ಯುದ್ಧದಲ್ಲಿ ಪಾಂಡವರಿಗೆ ಗೆಲುವಾಯಿತು. ಆದರೆ ಈ ಗೆಲುವು ಸೋಲಿನಂತೆಯೇ. ಯುಧಿಷ್ಠರ ಬಹಳ ದುಃಖಿತನಾದ. ಸಿಂಹಾಸನವನ್ನು ಆತ ತಿರಸ್ಕರಿಸಿದ. ಆಗ ವೇದವ್ಯಾಸನೇ ಬಂದು ಆತನಿಗೆ ನೀತಿಯ ಕತೆಗಳನ್ನು ಹೇಳಿ ಸಮಾಧಾನ

## ರಸಿಕ ಪುತ್ರಿಗೆ

ಮಾಡಿ, ಧರ್ಮದಿಂದ ರಾಜ್ಯವಾಳಲು ಹೇಳುತ್ತಾ "ಮಾನವನು ನಿರಾಶನಾಗ ಬಾರದು. ತನ್ನ ಧರ್ಮವನ್ನು ನಿರ್ವಹಿಸಬೇಕು. ನಿನಗೆ ಧರ್ಮದಿಂದ ರಾಜ್ಯ ದೊರೆತಿದೆ. ಧರ್ಮದಿಂದಲೇ ರಾಜ್ಯ ಪಾಲಿಸು." ಎಂದು ಹೇಳಿದ.

ಯುಧಿಷ್ಠಿರನು ಅವನ ಮಾತು ಕೇಳಿದ. ಅಶ್ವಮೇಧ ಯಜ್ಞ ಮಾಡಿದ. ಆ ಯಜ್ಞದಲ್ಲಿ ತನ್ನ ಇಡಿಯ ರಾಜ್ಯವನ್ನು ವ್ಯಾಸರಿಗೆ ದಾನ ಮಾಡಿದ. ತಾಪಸಿಯಾದ ವ್ಯಾಸ ರಾಜ್ಯ ಪಡೆದೇನು ಮಾಡಬಲ್ಲ? ಯುಧಿಷ್ಠಿರನ ರಾಜ್ಯವನ್ನು ಯುಧಿಷ್ಠಿರನಿಗೇ ಕೊಟ್ಟ. ಆತನಿಗೆ ಬಹುತರವಾದ ಉಪದೇಶ ಜ್ಞಾನ, ವಿಜ್ಞಾನದ ಮಾತುಗಳನ್ನು ಹೇಳಿ ತಪವನ್ನಾಚರಿಸಲು ಕಾಡಿಗೆ ಹೋದ.

ಕಾಡಿನಲ್ಲೇ ವೇದವ್ಯಾಸನು ವೇದ, ಶಾಸ್ತ್ರ, ಪುರಾಣ ಹಾಗೂ ಮಹಾಭಾರತದ ರಚನೆ ಮಾಡಿದುದು. ಮೊದಲು ಆತನ ಆಶ್ರಮ ಕುರುಕ್ಷೇತ್ರದ ಹತ್ತಿರ ವ್ಯಾಸವನದಲ್ಲಿತ್ತು. ನಂತರ ಅವನು ಬದರೀನಾಥದಿಂದಲೂ ಮುಂದೆ ಹೊರಟು ಹೋದ. ಇಂದು ಭಾರತದ ಸೀಮಾ ಪ್ರಾಂತ್ಯ ಎನ್ನಿಸಿಕೊಂಡಿರುವ ಕೊನೆಯ ಗ್ರಾಮ ಮಾನಾ ಗ್ರಾಮದ ಹತ್ತಿರ ಸರಸ್ವತೀ ನದಿಯ ತೀರದಲ್ಲಿ ವ್ಯಾಸನ ಆಶ್ರಮವಿದೆ. ಒಂದು ಸಣ್ಣ ಗುಹೆ. ಈ ಗುಹೆಯಲ್ಲೇ ವ್ಯಾಸನು ಪುರಾಣಗಳನ್ನು ರಚಿಸಿದನೆಂದು ಹೇಳುತ್ತಾರೆ.

ಆತನ ಉಪದೇಶಗಳಲ್ಲಿ ಮೂರು ಮಾತು ಗಮನವಿಡಬೇಕಾದುವು. ಮೊದಲನೆಯದು "ಈ ಪ್ರಪಂಚದಲ್ಲಿ ಮಾನವನಿಗಿಂತ ಶ್ರೇಷ್ಠವಾದುದು ಬೇರಿಲ್ಲ. ಎರಡನೆಯದು ಧರ್ಮಕ್ಕಿಂತ ಹೆಚ್ಚಿನದು ಯಾವುದೂ ಇಲ್ಲ ಮೂರನೆಯದು ಹಿಂಸೆಯಿಂದ ಮಾನವನ ಒಳಿತು ಆಗಲಾರದು"

ಮಹಾಭಾರತ ಕತೆಯಿಂದ ಈ ಮೂರು ಮಾತುಗಳೂ ಸಿದ್ಧವಾಗುತ್ತವೆ. ಎಷ್ಟೊಂದು ದೊಡ್ಡ ಯುದ್ಧ! ಎಷ್ಟೊಂದು ಸಾವು! ಆದರೂ ಪಾಂಡವರು ಗೆದ್ದರು. ಕೌರವರು ಸೋತರು. ಆದರೆ ಪಾಂಡವರ ಕಡೆ ಜನ ಉಳಿದರು. ಕೌರವರ ಕಡೆ ಮೂರು ಜನ ಮಾತ್ರ ಉಳಿದರು. ಇದು ಕೇವಲ ಹೆಸರಿಗೆ ಮಾತ್ರ ವಿಜಯ. ಎರಡು ಕಡೆಗೂ ಸಮಾನವಾದ ನಾಶವಾಗಿದೆ. ಪಾಂಡವರಿಗೆ ದೊರೆತ ರಾಜ್ಯ ಬಹಳ ದುರ್ಬಲವಾದುದು. ಒಂದು ವಿಧದಲ್ಲಿ ಧರ್ಮವು ನಷ್ಟವಾಯಿತು. ಅರ್ಜುನನ ಶಕ್ತಿಯೂ ನಷ್ಟವಾಯಿತು. ಶ್ರೀಕೃಷ್ಣನ ವಂಶದವರು ಪರಸ್ಪರ ಹೋರಾಡಿ ಸತ್ತರು. ಕೊನೆಗೆ ದುಃಖಿತರಾಗಿ ಪಾಂಡವರೂ ಹಿಮಾಲಯಕ್ಕೆ ಹೋದರು. ಅಲ್ಲೇ ಕೊರಗಿ ಸತ್ತರು. ಕೇವಲ ಯುಧಿಷ್ಠಿರನೊಬ್ಬನೇ ಸ್ವರ್ಗಕ್ಕೆ ಹೋದನೆಂದು ಹೇಳುತ್ತಾರೆ. ಇದು ಹೇಗಾದರೂ ಆಗಲಿ. ಹಿಂಸೆಯಿಂದ ಮಾನವನ ಏಳಿಗೆಯಾಗುವುದಿಲ್ಲವೆಂಬ ಮಾತು ಸತ್ಯ. ಇದನ್ನು ಹೇಳುವ ಸಾಹಸ ವೇದವ್ಯಾಸನಲ್ಲಿ ಮಾತ್ರವಿತ್ತು. ನಾವು ಇಂದು ವೇದಾಂತವೆಂದು ತಿಳಿಯುವ ಮಾನವ ಧರ್ಮವನ್ನೇ ಆತ ಹೇಳಿದುದು, "ನಾವು ತಿಳಿದುದೇ ಸತ್ಯವಲ್ಲ" ವೆಂಬುದೇ ವೇದಾಂತದ ಅರ್ಥ. ಬೇರೆಯವರು ಹೇಳುವುದರಲ್ಲಿಯೂ ನಾವು ನಂಬಿಕೆ ಇಡಬೇಕು. ಯಾರೂ ಸಣ್ಣ ದೊಡ್ಡವರಿಲ್ಲ; ಎಲ್ಲರೂ ಸಮಾನರು. ಏಕೆಂದರೆ, ಮಾನವನಿಗಿಂತ ಶ್ರೇಷ್ಠವಾದುದು ಬೇರಾವುದೂ ಇಲ್ಲ.

ಈ ರೀತಿಯ ಜ್ಞಾನದಾತನಾದ ವ್ಯಾಸನು ಹಿಂದುಗಳಿಗೆ ಪೂಜ್ಯ ಗುರು. ಆದುದರಿಂದ ಆಷಾಢ ಶುಕ್ಲ ಹುಣ್ಣಿಮೆಯನ್ನು ಗುರು ಪೂರ್ಣಿಮೆಯೆಂದು ಹೇಳುತ್ತಾರೆ. ಆದಿನ ಗುರು ಪೂಜೆಯ ಜೊತೆಗೆ ವೇದವ್ಯಾಸನ ಪೂಜೆಯೂ ಆಗುತ್ತದೆ.

ಮಹಾಭಾರತದ ಕಥೆ ಜೀವಂತವಿರುವ ತನಕ ವೇದವ್ಯಾಸನ ಹೆಸರೂ ಬದುಕಿರುತ್ತದೆ. ಕೇವಲ ಹಿಂದಿನ ಇಂದಿನದ್ದನ್ನು ಮಾತ್ರವಲ್ಲದೆ ಮುಂದಿನದ್ದನ್ನೂ ಯೋಚಿಸುವವನೇ ಋಷಿ. ಅಂತಹವರಲ್ಲಿ ವೇದವ್ಯಾಸ ಅಗ್ರಗಣ್ಯ.

( ವಿವಿಧ ಮೂಲಗಳಿಂದ )

(16 ನೇ ಪುಟದಿಂದ )

ಸಮರ್ಥವಾದುದು. ಈ ಇಚ್ಛಾಶಕ್ತಿಯು ಸ್ವಾಭಾವಿಕವಾಗಿಯೇ ಕರುಣೆಯಿಂದ ಕೂಡಿರುವುದರಿಂದ ಆಚಾರ್ಯಕಟಾಕ್ಷವೆಂಬ ನೆಪದಲ್ಲಿ ರಾಗದ್ವೇಷಾದಿಗಳೆಲ್ಲವನ್ನೂ ನಿರ್ಮೂಲವಮಾಡಿ ಜೀವಾತ್ಮನಿಗೆ ಸಂಸಾರನಿವಾರಣವನ್ನು ಮಾಡಿ ಸಂತೋಷಿಸುವುದು.

ಎರಡುತತ್ತ್ವಗಳಿಗೂ ಇರುವ ಈ ವ್ಯತ್ಯಾಸಗಳನ್ನು ಆಚಾರ್ಯರು ಮನಸ್ಸಿನಲ್ಲಿಟ್ಟುಕೊಂಡು ತಮ್ಮ ನಾಟಕದಲ್ಲಿ ಬಹು ಸೂಕ್ಷ್ಮದೃಷ್ಟಿಯಿಂದ ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡಿದ್ದಾರೆ. ಅವರು ಪ್ರಬೋಧಚಂದ್ರೋದಯವನ್ನು ಅನೇಕಸಲ ಮನನಮಾಡಿದ್ದಾರೆ ಅದರಲ್ಲಿ ಅವರಿಗೆ ಗೌರವ ಬುದ್ಧಿಯೂ ಇದೆ. ಅದರ ಅಭಿಪ್ರಾಯಗಳನ್ನು ಭಾಷೆಯನ್ನು ಸರಿಯೆಂದು ತೋರಿದೆಡೆಯಲ್ಲಿ ಕೆಲವುವ್ಯತ್ಯಾಸಮಾಡಿಕೊಂಡು ಉಪಯೋಗಿಸಿಕೊಂಡೂ ಇದ್ದಾರೆ. ಉಳಿದೆಡೆಗಳಲ್ಲಿ ಬಹುಕುಶಲಿಯಾದ ಶಿಲ್ಪಿಯಂತೆ ಸ್ವಲ್ಪಕುಂದಿಗೂ ಅವಕಾಶವಿಲ್ಲದಂತೆ ಮಾರ್ಪಡಿಸಿದ್ದಾರೆ.

ಈ ನಾಟಕಕ್ಕೆ ನಾಮಕರಣಮಾಡುವಾಗ ಆಚಾರ್ಯರಿಗೆ ಬಾದರಾಯಣರ 'ತದೇಕೋಜ್ವಲನಂ ತತ್ಪ್ರಕಾಶಿತದ್ವಾರಾ' ಎಂದು ಪ್ರಾರಂಭವಾಗುವ ಬ್ರಹ್ಮಸೂತ್ರವು ಜ್ಞಾಪಕದಲ್ಲಿರಬೇಕು ಇದರ ಪ್ರಕಾರ ಆತ್ಮನು ಮೋಕ್ಷವನ್ನು ಹೊಂದುವುದಕ್ಕೆ ಪೂರ್ವಭಾವಿಯಾಗಿ ಆ ಆತ್ಮನ ವಿಷಯವಲ್ಲಿ ಭಗವಂತನಿಗೆ ಅನುಗ್ರಹವುಂಟಾಗುವುದು. ಅದರ ಫಲವಾಗಿ ಆತ್ಮನಿಗೆ ದಿವ್ಯದೃಷ್ಟಿಯುಂಟಾಗುವುದು. ಈ ದಿವ್ಯಜ್ಞಾನದ ಫಲವಾಗಿ ಆತ್ಮನು ಸುಷುಮ್ನಾನಾಡಿಯ ಮೂಲಕ ಈ ಭೌತಿಕಶರೀರವನ್ನು ತ್ಯಜಿಸಿ ಭಗವಂತನನ್ನು ಸೇರುವನು. ಅಂದರೆ ಸಮಸ್ತದುಃಖಪರಂಪರೆಗಳನ್ನೂ ನಿರ್ಮೂಲಮಾಡಿ ಮೋಕ್ಷಮಾರ್ಗದಲ್ಲಿ ಆತ್ಮನನ್ನು ನಿಲ್ಲಿಸತಕ್ಕ ದಿವ್ಯಜ್ಞಾನವು ಲಭಿಸುವುದಕ್ಕೆ ಭಗವಂತನ ಅನುಗ್ರಹಸಂಕಲ್ಪವೇ ಕಾರಣ. ಸೂತ್ರಾಧಾರಪರಿಪುಷ್ಟವಾದ ಈ ಮಾರ್ಗವೇ ತಮ್ಮ ಸಿದ್ಧಾಂತಕ್ಕೆ ವಿಶೇಷವಾದ ಗುಣವೆಂಬುದನ್ನು ತಾವು ಕೊಟ್ಟಿರುವ ಹೆಸರಿನಿಂದ ಸೂಚಿಸಿದ್ದಾರೆ. ಅಲ್ಲದೆ ಆಚಾರ್ಯರು ಹೆಸರಿನಲ್ಲಿ ಚಂದ್ರನಿಗೆ ಬದಲಾಗಿ ಸೂರ್ಯನನ್ನೂ,(ಮೋಕ್ಷ)ಸಾಧನಗಳಲ್ಲಿ ಪ್ರಬೋಧಕ್ಕೆ ಬದಲಾಗಿ ಸಂಕಲ್ಪವನ್ನೂ ಉಪಯೋಗಿಸಿಕೊಂಡಿರುವುದು ಬಹುಸ್ವಾರಸ್ಯವೂ ಸಮಂಜಸವೂ ಆಗಿದೆ. ಮೋಕ್ಷಮಾರ್ಗಗಳಲ್ಲಿ ಚಂದ್ರನು ಅರ್ಚಿರಾದಿ ಧೂಮಾದಿ ಮಾರ್ಗಗಳೆರಡಕ್ಕೂ ಸಾಧನಗಳ ವ್ಯತ್ಯಾಸದಿಂದ ಸಮಾನನಾಗುವನೆಂದೂ; ಸೂರ್ಯನು ಏಕಮಾತ್ರ ಸ್ಥಾನವನ್ನು ಪಡೆದಿರುವನೆಂದೂ ತಿಳಿಯಪಡಿಸುವುದು ಅವರ ಮುಖ್ಯೋದ್ದೇಶವಿರಬೇಕು.ಅಲ್ಲದೆ ಧಾರ್ಮಿಕ ಪ್ರಪಂಚದಲ್ಲಿ ಸಾಮಾನ್ಯವಾಗಿ ಸಂಸಾರವನ್ನು ರಾತ್ರಿಗೆ ಹೋಲಿಸುತ್ತಾರೆ. ಚಂದ್ರೋದಯದಿಂದ ಈ ಸಂಸಾರನಿಶಿಯ ಅಂಧಕಾರವು ನಾಶವಾಗಬಹುದೇ ವಿನಾ ರಾತ್ರಿಯೇ ನಾಶವಾಗುವುದಿಲ್ಲ. ರಾತ್ರಿಯೇ (ಸಂಸಾರವೇ) ನಾಶವಾಗಬೇಕಾದರೆ ಸೂರ್ಯೋದಯವೇ ಆಗಬೇಕು. ಆದುದರಿಂದ ಭಗವಂತನ ಅನುಗ್ರಹಸಂಕಲ್ಪಸೂರ್ಯೋದಯದಿಂದ ಸಂಸಾರ ರಾತ್ರಿಯು ಮಾಯವಾಗುವುದು ಎಂಬುದನ್ನು ಸೂಚಿಸುವುದು ಬಹುಸ್ವಾರಸ್ಯವಾಗಿದೆ.

ಇನ್ನು ನಾಟಕದ ಪ್ರಮಾಣದ ವಿಷಯ. ಇದು ಅಪ್ರಯೋಜಕವಾಗಿ ಬಹು ವಿಲಂಬಿಸಲ್ಪಟ್ಟಿದೆಯೆಂಬುದು ಕೆಲವರ ಮತ. (ನಮಗೂ ಕೆಲವೆಡೆಯಲ್ಲಿ ಹಾಗೆಯೇ ಅನ್ನಿಸುತ್ತದೆ). ಆದರೆ ಆಚಾರ್ಯರು ಈ ನಾಟಕವನ್ನು ಅಖಿಲ ಜಗತ್ಸೂತ್ರಧಾರನಾದ ಶ್ರೀಮನ್ನಾರಾಯಣನಿಗೆ ಅರ್ಪಿಸಿದ್ದಾರೆ. ಅವನಿಗೆ ಅರ್ಪಿಸಿರುವ ಈ ನಾಟಕದಲ್ಲಿ ಅವನು ನಟಿಸಿದ ಹತ್ತು ಅಂಕಗಳ ಛಾಯೆಯೇ ಇರಬೇಕೆಂದು ಆಚಾರ್ಯರ ಅಭಿಪ್ರಾಯವಿರಬೇಕು ಅಲ್ಲದೆ ನಾಟಕದಲ್ಲಿ ಪ್ರಧಾನವಾದ ರಸ ಶಾಂತರಸ. ಈ ರಸವು ಸರಿಯಾದ ಪೂರ್ವಸಿದ್ಧತೆಯೂ ವ್ಯವಸಾಯವೂ ಇಲ್ಲದೆ ಥಟ್ಟನೆ ದ್ಯೋತಿತವಾಗತಕ್ಕದಲ್ಲ. ನಾಟಕವು ಸಂಕಲ್ಪಸೂರ್ಯೋದಯದೊಂದಿಗೆ ಮುಕ್ತಾಯವಾಗಬೇಕು. ಈ ದೃಷ್ಟಿಯಿಂದ ನಾಟಕವು ಪೂರ್ಣವಾಗಿ ರಾತ್ರಿಯೆಲ್ಲ ಅಭಿನಯಿಸಲ್ಪಟ್ಟು ಪ್ರಭಾತಸೂರ್ಯೋದಯಕ್ಕೆ ಸರಿಯಾಗಿ ಮುಗಿಸುವುದರಿಂದ ಸೂರ್ಯೋದಯದ ಭಾವನೆಯು ಸಮಂಜಸವಾಗಬಹುದೆಂಬ ಅಭಿಪ್ರಾಯದಿಂದಲೂ ಹೀಗೆ ಮಾಡಿರಬಹುದು.

ಈ ನಾಟಕಗಳಲ್ಲಿ ಬರುವ ಪಾತ್ರಗಳೆಲ್ಲ ಆಕಾರವಿಲ್ಲದ ಧರ್ಮಗಳು ಮತ್ತು ಗುಣಗಳು. ಆದರೂ ಅವು ರಂಗಸ್ಥಳಕ್ಕೆ ಬಂದಾಗ ಆಯಾ ಧರ್ಮಾನುಯಾಯಿಗಳೂ ಗುಣಾವಲಂಬಿಗಳೂ ಆಗಿ ಕಾಣುವುದರಿಂದ ಸಾಕಾರವಾಗಿಯೂ ಜೀವಂತವಾಗಿಯೂ ಕಾಣುವುವು. ನಾಯಕಾದಿ ಪಾತ್ರಗಳಿಗೆ ಬೇಕಾದ ಸಕಲ ಲಕ್ಷಣಗಳೂ ಅವುಗಳಲ್ಲಿರುತ್ತವೆ. ಉದಾಹರಣೆಗೆ ಮುಂದಿನ ವಿವೇಕ ಮತ್ತು ಲೋಭರ ವರ್ಣನೆಯನ್ನು ನೋಡಬಹುದು.

ವಿವೇಕ

ಮಹಾಸತ್ತ್ವೋದಾರ
ಸ್ಥಿರಮಧುರ ಗಂಭೀರಹೃದಯಃ
ಕೃಪೋತ್ಸಾಹೋತ್ತುಂಗಃ
ಕೃತವಿದಭಿಗಮ್ಯಃ ಪ್ರಣಯಿನಾಮ್
ಶ್ರುತಪ್ರಜ್ಞಾಮೇಧಾ
ಸ್ಮೃತಿ ಜಲಧಿರಕ್ಷುದ್ರಚರಿತಃ
ತ್ವಮೇಕಃ ಸರ್ವಾಸಾ
ಮನಘ ಭಣಿತೀನಾಮಭಿಮತಃ ॥

ಲೋಭ :

ಧರ್ಮಧ್ವಂಸಧುರಂಧರ ಶ್ಶಮ
ದಮಪ್ರಾರಂಭ ಸರ್ವಂಕಷಃ
ಪ್ರಜ್ಞಾವಾರಿಧಿ ಘಸ್ಮರಃ
ಪ್ರಣಿದಧತ್ತತ್ತ್ವೂಹ ಮೃತ್ಯುಂಜಯಃ
ಮುಕ್ತಿಪ್ರಾರ್ಥನ ಮೋಚನಾಯ
ಮಹತಾಂ ಮೋಹೇನ ಸಂಪ್ರೇಷಿತಃ
ತೃಷ್ಣಾವಾರವಿಲಾಸಿನೀಸಹಚರೋ
ಲೋಭಃ ಕಿಲೋದೀಯತೇ ॥

ಸಂಪ್ರದಾಯಬದ್ಧವಾದ ಎಲ್ಲಾ ನಾಟಕಗಳಲ್ಲಿಯೂ ಹಾಸ್ಯರಸೋತ್ಪಾದನೆಗಾಗಿ ವಿದೂಷಕನ ಪಾತ್ರವನ್ನು ಉಪಯೋಗಿಸುವುದು ರೂಢಿಯಾಗಿದೆ. ಆದರೆ ಆಚಾರ್ಯರು ಈ ನಾಟಕದಲ್ಲಿ ವಿದೂಷಕನ ಪಾತ್ರವನ್ನು ಉಪಯೋಗಿಸದಿದ್ದರೂ ಹಾಸ್ಯರಸವನ್ನುಂಟುಮಾಡುವ ಅನೇಕ ಸನ್ನಿವೇಶಗಳನ್ನು ತಂದಿದ್ದಾರೆ. ನಾಲ್ಕನೆಯ ಅಂಕದಲ್ಲಿ ಬರುವ ಕಾಮ ದರ್ಪ ಮುಂತಾದವರ ಪ್ರತಾಪಾಡಂಬರಗಳು ಇವುಗಳಿಗೆ ಉತ್ತಮ ಉದಾಹರಣೆಗಳು.

ಕಾಮ :

ಇಕ್ಷುಃಪೇಶಲಮೀದೃಶಂ
ಮಮಧನುಃ ಪುಷ್ಪಾಣ್ಯಮೀಸಾಯಕಾಃ
ತಂತ್ರೀಮಂಜುಲ ನಿಸ್ವನಾ
ಮಧುಕರಶ್ರೇಣೀ ಶುಭಾಶಿಂಜಿನೀ ।
ಭೀರುಸನ್ನ ಬಲಾಜನೋ
ಮಮ ಬಲಂ ತಥ್ಯಂ ಪರಂ ಕಥ್ಯತೇ
ಸೋಹಂ ನಿರ್ಜಿತ ಶೂಲಭೃತ್ಪ್ರಭೃತಿಕಸ್ಸಂ
ಕಲ್ಪ ಸಿದ್ಧೋದಯಃ ॥

ದರ್ಪ :

ತುಂಡೀರಂ ಮಂಡಲಂ ನೋ ಕುಲಪತಿರವಿಚ
ಸ್ಕಂದಭೂಪಾಲ ವಂದ್ಯಃ
ಕ್ಷೇತ್ರಂ ಸತ್ಯವ್ರತಾಖ್ಯಂ ಕ್ಷಿತಿತಲತಿಲಕಂ
ಕ್ಷುದ್ರಕಾಂಚ್ಯಗ್ರಹಾರಃ
ಪ್ರಖ್ಯಾತ ಶ್ಶಿಷ್ಯಭೂಮ್ನಾ ದಿಶಿದಿಶಿ ಭವತಾ
ಕೂಪಕೂರ್ಮೋಪಮೇನ
ನ್ಯಾಯ್ಯಾ ವಾದಾಹವೇಷು ಸ್ಥವಿರ ಕಥಮಹಂ
ನಶ್ರುತೋ ನಾಪಿದೃಷ್ಟಃ ॥

ಮೇಲಿನ ಶ್ಲೋಕಗಳಲ್ಲಿ ಹಾಸ್ಯವೇ ಅಲ್ಲದೆ ಉದ್ದೇಶಪೂರ್ವಕವಾದ ವಿಡಂಬನವೂ ಇರುವಂತೆ ಕಾಣುತ್ತದೆ. ಆಚಾರ್ಯರ ಕಾಲವು ಧರ್ಮದೃಷ್ಟಿಯಿಂದ ಒಂದು ಸಂಧಿಸಮಯ. ವೈದಿಕಮತವೇ ಕ್ಷೀಣಸ್ಥಿತಿಯಲ್ಲಿದ್ದಂತೆ ಕಾಣುತ್ತದೆ. ವಿರೋಧಿ ತತ್ತ್ವಗಳನ್ನುಳ್ಳ ಬೇರೆ ಬೇರೆ ಮತಗಳೂ ಅಲ್ಲಲ್ಲಿ ಪ್ರಚಾರದಲ್ಲಿದ್ದುದರಿಂದ ಒಂದೇ ಕುಟುಂಬದ ಜನರು ಬೇರೆ ಬೇರೆ ಮತಗಳನ್ನು ಅವಲಂಬಿಸಿದ್ದಂತೆ ಕಾಣುತದೆ.

ಅದನ್ನು ಆಚಾರ್ಯರು ಮುಂದಿನ ಶ್ಲೋಕದಲ್ಲಿ ಬಹುಸ್ವಾರಸ್ಯವಾಗಿ ಚಿತ್ರಿಸಿದ್ದಾರೆ.

ಶ್ವಶ್ರೂರಸ್ಯ ದಿಗಂಬರವ್ರತವತೀ ಸಂಬಂಧಿನಃ
ಸೌಗತಾಃ
ಮಾತಾಚಾಸ್ಯ ಪಿತಾ ಚ ಪಾಶುಪತಿನೌ
ವೈದೇಶಿಕೋ ದೇಶಿಕಃ ।
ಜಾಯಾ ತಿಷ್ಠತಿ ಸಾಂಖ್ಯಯೋಗ ಸನಯೋ
ಚಾರ್ವಾಕ ಶಿಷ್ಯಸ್ಸಖಾ
ಮಿಥ್ಯಾಚಾರ ಸಮಾಹ್ವಯ ಸ್ಸ್ವಯಮಸೌ
ವಿಪ್ಲಾವಕೋ ವೈದಿಕಃ ॥

ಭಿನ್ನಮತಗಳ ಔತ್ಕರ್ಷಕೋಲಾಹಲದಲ್ಲಿ ಜನಗಳಿಗೆ ಬರಿಯ ಬಾಹ್ಯಾಡಂಬರದಲ್ಲಿ ವಿಶೇಷಗಮನವು ಹೆಚ್ಚಿ ತಥ್ಯಾಂಶವನ್ನು ಮರೆತು ಸ್ವಮತಾಭಿವೃದ್ಧಿಗಾಗಿ ಅನೇಕ ನಿಂದನೀಯವಾದ ಕೆಲಸಗಳನ್ನು ಮಾಡುತ್ತಿದ್ದಂತೆ ಕಾಣುತ್ತದೆ. ವೈರಾಗ್ಯವೇ ಮೂರ್ತಿವೆತ್ತಂತಿದ್ದ ಆಚಾರ್ಯರಿಗೆ ಅದು ಬಹಳ ಅಸಹ್ಯವೂ ಹೇಯವೂ ಆಗಿ ಕಂಡಿರಬೇಕು. ಅದಕ್ಕಾಗಿ ಅವರು ಮುಂದಿನ ಶ್ಲೋಕಗಳಲ್ಲಿ ಅವರನ್ನು ಬಹಳವಾಗಿ ಅವಹೇಳನ ಮಾಡಿದ್ದಾರೆ.

ಅಪಟುಘಣಿತಿ ಭಾವಾತ್ ಬಿಭ್ರತೋ
ಜ್ಞಾನಮುದ್ರಾಂ
ಅನಿತರಶರಣತ್ವಾತ್ ಆದೃಶಾನ್ಯೋನ್ಯ
ಸಂಘಾಃ
ಅಗತಿ ವಿಹಿತಭಿಕ್ಷಾವೃತ್ತಯಃ ಕೇಚಿದೇತೇ
ಚಿರವಿಧೃತತುರಂಗ ಬ್ರಹ್ಮಚರ್ಯಾ
ಮಹಾಂತಃ ॥
ಡಂಬಸ್ಯೇವ ಧ್ವಜಮಮಿತಯಾ ಮಂಡಿತಂ
ದರ್ಭಮುಷ್ಟ್ಯಾ
ದ್ರಾಘೀಯಾಂಸಂ ಕಮಪಿ ಪುರತಸ್ಸಂಪ್ರತಿ
ಷ್ಠಾಪ್ಯ ದಂಡಮ್ ।

ಪಾದೋಪಾಂತಪ್ರಣಿಹಿತಧನಾನ್
ಪ್ರಾಣಿನೋ ಭಕ್ತಿನಮ್ರಾನ್
ನಾಪೇಕ್ಷಂತೇ ಕಿತವಮುನಯಃ ನಾಮತಃ
ತೀರ್ಥಪಾದಾಃ ॥
ಭಿಕ್ಷೇತಿ ಶಿಷ್ಯಜನರಕ್ಷಣದಕ್ಷಿಣೇತಿ
ಶಾಟೀತಿ ಶಾಶ್ವತಮ.ಠೋಪಧಿಕಲ್ಪನೇತಿ ।
ಗ್ರಂಥೋಪಸಂಗ್ರಹಣಮೂಲ್ಯಮಿತಿ
ಬ್ರುವಾಣಾಃ
ಸಂನ್ಯಾಸಿನೋಽಪಿ ದಧತೇ ಸತತಂ
ಧನಾಯಾಮ್ ॥

ಈ ಶ್ಲೋಕಗಳು ಮೇಲೆ ನೋಡುವುದಕ್ಕೆ ಹಾಸ್ಯಯುಕ್ತವಾಗಿದ್ದರೂ ದಾರಿತಪ್ಪಿ ಮೇಲಿನ ಸ್ಥಿತಿಯಲ್ಲಿರುವವರಿಗೆ ಎಂತಹ ಹೃದಯಶಲ್ಯವೆಂಬುದನ್ನು ಊಹಿಸಿಕೊಳ್ಳಬಹುದು;

ಆಚಾರ್ಯರ ಇತರ ಗ್ರಂಥಗಳಂತೆಯೇ ಇಲ್ಲಿಯೂ ಅವರ ಕವಿತಾವೈಭವದ ವೈಭವವನ್ನು ಕಾಣಬಹುದು. ಸೂರ್ಯಚಂದ್ರರ ಉದಯಾಸ್ತಗಳ ವರ್ಣನೆ ಬಹು ಮನೋಹರವಾಗಿವೆ. ಅಲ್ಲಲ್ಲಿ ಪ್ರಾಚೀನಕವಿಗಳ ಪ್ರಭಾವವೂ ಸ್ಪಷ್ಟವಾಗಿದೆ. ಧಾರ್ಮಿಕವಿಷಯಕವಾದ ನಾಟಕವಾದುದರಿಂದ ಸಾಮಾನ್ಯವಾಗಿ ಸರ್ವರಿಗೂ ರುಚಿಸುವುದು ಕಷ್ಟ. ರಂಗಸ್ಥಳಕ್ಕೆ ಸುಲಭವಾಗಿ ಅಳವಡಿಸುವುದೂ ಪ್ರಯಾಸವೇ. ಆದರೂ ದಿವಂಗತ ಮ. ಮ. ಶೇಟ್ಲೂರ್ ನರಸಿಂಹಾಚಾರ್ಯ ಸ್ವಾಮಿಗಳು ಇದನ್ನು ರಂಗಸ್ಥಳದಮೇಲೆ ಬಹು ಯಶಸ್ವಿಯಾಗುವಂತೆ ಅಭಿನಯಿಸಲೇರ್ಪಡಿಸಿದ್ದರೆಂಬ ಸಂಗತಿ ಶ್ಲಾಘನೀಯವಾದುದು. ತತ್ತ್ವಾರ್ಥಗಳನ್ನು ತಿಳಿದುಕೊಳ್ಳಬೇಕೆಂಬ ಜಿಜ್ಞಾಸುಗಳಿಗೆ ಸುಲಭವಾಗಿ ವಿಷಯಗ್ರಹಣವಾಗುವುದಕ್ಕಾಗಿ ಆಚಾರ್ಯರು ಅನೇಕ ಸೌಲಭ್ಯಗಳನ್ನುಂಟುಮಾಡಿದ್ದಾರೆ. ಭಾಷೆಯು ಅವರ ಪ್ರಕರಣ ಗ್ರಂಥಗಳಷ್ಟು ಕ್ಲಿಷ್ಟವಾಗಿಲ್ಲ. ನಾಟಕದ ಉದ್ದಕ್ಕೂ ಚಿರಪರಿಚಿತವಾದ ಸನ್ನಿವೇಶಗಳನ್ನೇ ಉಪಯೋಗಿಸಿಕೊಂಡಿದ್ದಾರೆ. ಉಪಮಾನಗಳೆಲ್ಲವೂ ಸುಲಭವಾಗಿ ಅರ್ಥಮಾಡಿಕೊಳ್ಳತಕ್ಕವು. ನಾಟಕದ ಉದ್ದಕ್ಕೂ ಬರುವ ಲೋಕೋಕ್ತಿಗಳು ಬಹು ಭಾವಗರ್ಭಿತವಾಗಿರುವುದಲ್ಲದೆ ವಿಶೇಷ ಸಂಖ್ಯೆಯಲ್ಲಿರುವುದರಿಂದ ಈ ನಾಟಕವು ಲೋಕೋಕ್ತಿಯ ಕೈಪಿಡಿಯಂತಿದೆ. ಮುಂದಿನ ಕೆಲವನ್ನು ನೋಡಬಹುದು "ನ ಹಿ ಜಗತಿ ಭವತಿ ಮಶಕೋ ಮಾತಂಗಸ್ಯ ಪ್ರತಿಸ್ಪರ್ಧಿ, ಬಿಸತಂತುನೇನ ಸುರದಂತಿಯಂತ್ರಣಂ, ನಹಿತರಕ್ಷುಃ ಮೃಗರಾಜಸ್ಯ ಪರಿಪಂಥೀ, ನಖಲು ಕ್ಷುಧಿತೋಽಪಿ ಶಾರ್ದೂಲಃ, ಕದಾಚಿದಪಿ ಶಾದ್ವಲಮತ್ತಿ, ಲವಣವಣಿಜಃ ಕರ್ಪೂರಾರ್ಘಂ ಕಿಮಿಚ್ಛಭಿಮನ್ಯತೆ, ನಿಮೀಲಯಂತು ಲೋಚನೇ ನಹಿ ತಿರಸ್ಕೃತೋ ಭಾಸ್ಕರಂ, ಶ್ರವಸ್ಥಗಯತು ಸ್ಥಿರಂ ಪರಭೃತಃ ಕಿಮುಧ್ವಾಂಕ್ಷತಿ, ಸ್ವಯಂ ಭ್ರಮತು ಬಾಲಕೋನ ಬಲು ಬಂಭ್ರಮೀತಿ ಕ್ಷಿತಿಃ, ಕದರ್ಥಯತುಮುಷ್ಟಿಭಿಃ ಕಥಯ ಕಿಂ ನಭಃ ಕ್ಷುಭ್ಯತೆ, ನ ಖಲು ಬಧಿರಾಣಾಂ ಕುತೂಹಲಮಾತನೋತಿ ಕೋಕಿಲಾಲಾಪಃ, ಲವಣಾಕರೆ ಲವಣಸೇತುರಾಧಿತ್ಯತಃ ಸಹಸ್ರಕಿರಣಸ್ಯ ತೇಜೋವರದಾನಂ, ಗತಜಲಸೇತುಬಂಧಃ, ಗಗನತಲಾನ.ಲೇಪ, ಗಣಿಕಾರಿಣಿತಿಃ" – ಇವೇ ಮೊದಲಾದುವು ಭಾವಗ್ರಹಣಕ್ಕೆ ಸಹಾಯಮಾಡುವುವಲ್ಲದೆ ನಾಟಕದಲ್ಲಿ ಒಂದು ಆತ್ಮೀಯತೆಯನ್ನುಂಟುಮಾಡುತ್ತವೆ.

'ಸಂಕಲ್ಪಸೂರ್ಯೋದಯ' ದಲ್ಲಿ ವೇಂಕಟನಾಥಾರ್ಯರು ಅಲ್ಲಲ್ಲಿ ತಮ್ಮ ಸ್ವಂತವಿಷಯಗಳನ್ನು ಸೂಚಿಸಿದ್ದಾರೆ. ಇಲ್ಲಿನ ಎರಡನೆಯ ಅಂಕದಲ್ಲಿ ಬರುವ ಗುರುಶಿಷ್ಯ ಸಂವಾದವು ತಮ್ಮ ಮತ್ತು ಆಚಾರ್ಯರಾದ ಶ್ರೀ ರಾಮಾನುಜಾಚಾರ್ಯರ ಸಂವಾದವೆಂದೇ ಹೇಳಬಹುದು. ಆಚಾರ್ಯರಿಗೆ ತಮ್ಮ ಗುರುಗಳಲ್ಲಿಯೂ ಅವರ ಉಪದೇಶದಲ್ಲಿಯೂ ವಿಶೇಷ ಪ್ರತಿಪತ್ತಿ. ಅವರ ಮತ್ತು ಅವರ ಸಿದ್ಧಾಂತದ ಮೇಲ್ಮೆಯನ್ನು ಪ್ರತಿಷ್ಠಾಪಿಸುವುದಕ್ಕಾಗಿಯೇ ಈ ನಾಟಕವನ್ನು ರಚಿಸಿದುದು. ಈ ಕಾರ್ಯದಲ್ಲಿ ಅವರು ಪೂರ್ಣಕೃತ್ಯರಾಗಿದ್ದಾರೆಂದು ನಿಸ್ಸಂದೇಹವಾಗಿ ಹೇಳಬಹುದು.

'ಸಂಕಲ್ಪಸೂರ್ಯೋದಯ' ಕ್ಕೆ ಅಹೋಬಿಲಾಚಾರ್ಯಕೃತ 'ಪ್ರಭಾವಿಲಾಸ' ಮತ್ತು ನರಸಿಂಹರಾಜಕೃತ 'ಪ್ರಭಾವಳಿ' ಎಂಬ ಎರಡು ವ್ಯಾಖ್ಯಾನಗಳಿವೆ. ಇವು ಅಡೆಯಾರ್ ಪುಸ್ತಕಾಲಯದಿಂದ ಪ್ರಕಾಶಿತವಾಗಿವೆ. ಅಲ್ಲದೆ ಶ್ರೀಶೈಲ ತಾತಾಚಾರ್ಯ ಮತ್ತು ಕೌಶಿಕರಾಮಾನುಜಾಚಾರ್ಯರ ಸಂಸ್ಕೃತ ವ್ಯಾಖ್ಯಾನಗಳೂ ಇವೆ. ಮ. ಮ. ಶೇಟ್ಲೂರ್ ನರಸಿಂಹಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇದೆ. ★

(14 ನೇ ಪುಟದಿಂದ)

ಸೊಗಸಿನೆಳಸಿಕೆಗೊಂದು,
ತನ್ನಾತ್ಮಕೆನ್ನೊಂದು
ಬಗೆಯೆಷ್ಟೋ ಪೊಗವಷ್ಟು – ಮಂಕುತಿಮ್ಮ

ಮಾನವನ ಸ್ವಭಾವ ಹತ್ತು ರೀತಿಯದು. ರಾವಣನಿಗೆ ಹತ್ತು ತಲೆಯಾದರೆ ನರನಿಗೆ ನೂರು ತಲೆ.

ರಾವಣನ ದಶ ಶಿರವದೇಂ ?
ನರನು ಶತಶಿರನು
ಸಾವಿರಾಸ್ಯಗಳನೊಂದರೊಳಣಗಿಸಿಹನು
ಹಾವಾಗಿ ಹುಲಿಯಾಗಿ ಕಪ್ಪೆ ಹುಲ್ಲೆಯುಮಾಗಿ
ಭೂವ್ಯೋಮಕತಿಶಯನು – ಮಂಕುತಿಮ್ಮ

ತಿಮ್ಮಗುರುವಿನ ದೃಷ್ಟಿಯಲ್ಲಿ ಪ್ರಗತಿ ತತ್ತ್ವವೆಂದರೆ,

ನೂತ್ನತೆಯು ಪೂರ್ಣತೆಯನನ್ಯೂನತೆಯಗಳಿಪ
ಯತ್ನವೇ ಪೌರುಷ ಪ್ರಗತಿ, ಅದೇ ಪ್ರಕೃತಿ
ವಿಜ್ಞಾನ ಶಾಸ್ತ್ರ ಕಲೆ ಕಾವ್ಯ ವಿದ್ಯೆಗಳೆಲ್ಲ
ಧನ್ಯತೆಯ ಬೆದಕಾಟ – ಮಂಕುತಿಮ್ಮ

ಮಾನವಮತಿ ಲೋಕದಲ್ಲಿ ಸತ್ಯವೂ ಮಂಗಳವೂ ಆದದ್ದನ್ನು ಗುರುತಿಸಿ ಬದುಕಿನಲ್ಲಿ ಅವುಗಳನ್ನು ಆಚರಿಸುತ್ತ ನಡೆದರೆ ಅದೇ ಪೌರುಷ ಪ್ರಗತಿ. ಜಾತಿ, ಮತ, ಧರ್ಮ ಮತ್ತು ರಾಜ್ಯ ಸಂಧಾನಗಳು, ಬುದ್ಧಿಗಳಿಸುವ ಅತ್ಯಲ್ಪ ವಿಜಯ ಎಂಬುದು ಲೋಕ ಗುರುವಿನ ಉಪದೇಶ.

ಸಂಘ ಜೀವಿಯಾದ ವ್ಯಕ್ತಿ ಮಾನವ ಸ್ವಭಾವದ ಬಗ್ಗೆ ಆಕ್ಷೇಪಿಸುವುದು ತರವಲ್ಲ. ಸಮಾಜದಲ್ಲಿ ಹೊಂದಿಕೊಂಡು ಬದುಕುವುದೇ ಸರಿಯಾದ ಮಾರ್ಗವೆಂದಿದ್ದಾರೆ,

ನರರ ಸ್ವಭಾವ ವಕ್ರಗಳನೆಣಿಸುವುದೇಕೆ ?
ಗಿರಿ ಕಣಿವೆಗಳ ಗಣಿಸಿ
ರೋಷಗೊಳ್ಳುವೆಯೇಂ ?
ಸುರೆ ಗರಲ ಸುಧೆಗಳ್ ಅಬ್ಧಿಯಲಿ
ಸೋದರರಲ್ತೆ?
ಅರಿತೊಗ್ಗು ಸಾಜಕ್ಕೆ – ಮಂಕುತಿಮ್ಮ

ಸಮುದ್ರದಲ್ಲಿ ಅಮೃತ ಹಾಲಾಹಲ ಎರಡೂ ಇದ್ದರೂ ಅವೆರಡೂ ಸೋದರರ ಹಾಗಿಲ್ಲವೆ ? ಆದ್ದರಿಂದ ಮಾನವ ಸಮಾಜದ ಬದುಕಿಗೆ ಹೊಂದಿಕೊಳ್ಳುವುದನ್ನು ಕಲಿಯಬೇಕು

ನಮ್ಮ ದೃಷ್ಟಿಯಂತೆ ಸೃಷ್ಟಿ. ಭಗವಂತ ಲೋಕದ ಚರಾಚರ ವಸ್ತುಗಳಲ್ಲಿ ಒಳಿತನ್ನೇ ತುಂಬಿದ್ದಾನೆ. ಸತ್ಯ, ಶಿವ, ಸುಂದರತೆಗಳು ಸಚ್ಚಿದಾನಂದ ಸ್ವರೂಪಿಯಾದ ಭಗವಂತನ ವಿವಿಧ ರೂಪಗಳಷ್ಟೇ. ಅವುಗಳನ್ನು ಕಾಣುವ ಕಣ್ಣು ನಮಗಿರ ಬೇಕು. ಆ ದಿವ್ಯ ದೃಷ್ಟಿಯೇ ಅನುಭಾವಿಗೆ ಬೇಕಾಗಿರುವ ಒಳಗಣ್ಣು .

ಸತ್ಯವೆಂಬುದದೆಲ್ಲಿ ? ನಿನ್ನಂತರಂಗದೊಳೋ
ಸುತ್ತ ನೀನನುಭವಿಪ ಬಾಹ್ಯ ಚಿತ್ರದೊಳೊ
ಯುಕ್ತಿಯಿಂದೊಂದ ನೊಂದಕೆ
ತೊಡಿಸಿ ಸರಿನೋಡೆ
ತತ್ತ್ವದರ್ಶನವಹುದು – ಮಂಕುತಿಮ್ಮ

ಹೀಗೆಯೇ ದೇಹ ಆತ್ಮಗಳ ಸಂಬಂಧವನ್ನು ಕುದುರೆ ಮತ್ತು ಸವಾರನಿಗೆ ಹೋಲಿಸಿ ಆ ಸಂಬಂಧವನ್ನು ತಿಮ್ಮಗುರು ಬಹುಮಾರ್ಮಿಕವಾಗಿ ವಿವರಿಸಿದ್ದಾರೆ. ಅತ್ಯಂತ ಗಹನವಾದ ತತ್ತ್ವ ಸುಲಭ ಗ್ರಾಹ್ಯವಾಗಿವೆ. 'ದೇಹ ದೇಗುಲ' ವೆಂದು ಬಸವೇಶ್ವರರು ಹೇಳಿದ್ದಾರೆ.

ತಿಮ್ಮ ಗುರುವು ಬೋಧಿಸಿರುವುದೂ ಇದೇ ಮಾತಾಗಿದೆ. ಮಾನವನ ದೇಹ ಕಲ್ಮಷದ ವಲ್ಮೀಕವಲ್ಲ. ಋಷಿಗಳು ಅದನ್ನು ಬ್ರಹ್ಮಪುರಿ ಎಂದು ಕರೆದಿದ್ದಾರೆ. ಆದರೆ ದೇಹದಲ್ಲಿರುವ ಇಂದ್ರಿಯಗಳಿಗೆ ಕಡಿವಾಣ ತೊಡಿಸಿದರೆ ಮಾತ್ರ ಮಾನವ ತನ್ನ ಗುರಿ ಮುಟ್ಟಬಲ್ಲ. ದೇಹವೆಂಬ ಕುದುರೆಯನ್ನು ಓಡಿಸುವ ಸವಾರನಾದ ಆತ್ಮ ತನ್ನ ವಾಹನದೊಡನೆ ಸ್ನೇಹ ಸಂಬಂಧವನ್ನು ಹೊಂದಿರಬೇಕು.

ದೇಹವೆಂಬುದು ಕುದರೆಯಾತ್ಮನದರಾರೋಹಿ
ವಾಹನವನುಪವಾಸವಿರಿಸೆ ನಡೆದೀತೆ ॥
ರೋಹಿ ಜಾಗ್ರತೆದಪ್ಪೆ ಯಾತ್ರೆ
ಸುಖ ಸಾಗೀತೇ ? ।
ಸ್ನೇಹವೆರಡಕಮುಚಿತ – ಮಂಕುತಿಮ್ಮ ॥

ಇಲ್ಲದಿದ್ದಲ್ಲಿ ಮನುಷ್ಯ ಇಂದ್ರಿಯ ತೃಪ್ತಿಯ ಕ್ಷಣಿಕ ಸುಖಕ್ಕೆ ಒಳಗಾಗಿ ವಿನಾಶದ ಮಾರ್ಗ ಹಿಡಿಯುತ್ತಾನೆ.

ತಿಮ್ಮ ಗುರುವಿನ ದೃಷ್ಟಿಯಲ್ಲಿ ಜೀವನವೇ ಒಂದು ಕಾವ್ಯ. ಬದುಕಿನಲ್ಲಿ ಬರುವ ಪ್ರೀತಿ, ವಿಶ್ವಾಸ, ಅನುಕಂಪೆ, ಸತ್ಯ, ಧರ್ಮ, ಕರುಣೆ, ಹಾಸ್ಯ – ಇವುಗಳೇ ಜೀವ ಕಾವ್ಯದ ರಸಗಳು. ಇವುಗಳು ಪ್ರತಿಯೊಬ್ಬ ವ್ಯಕ್ತಿಯ ಬದುಕಿನಲ್ಲಿಯೂ ಹದವಾಗಿ ಬೆರೆತು ಅವುಗಳ ಸುಖವನ್ನು ತಾನೂ ಉಂಡು ಪರರಿಗೂ ಹಂಚಿದಾಗ ಬದುಕು ಸಾರ್ಥಕವೆನಿಸುತ್ತದೆ. ಆಗ ತಾನು ಬದುಕುತ್ತಿರುವ ಸಮಾಜದಲ್ಲಿಯೂ ಸುಖಶಾಂತಿಗಳೂ ವೃದ್ಧಿಸುತ್ತವೆ. ವಾಲ್ಮೀಕಿ, ವ್ಯಾಸ ಮಹರ್ಷಿಗಳು ತಮ್ಮ ಮಹಾಕಾವ್ಯಗಳಲ್ಲಿ ಇವುಗಳನ್ನು ನಿರೂಪಿಸಿರುವುದರಿಂದ ಅವು ಒಂದು ಜನಾಂಗದ ಸಂಸ್ಕೃತಿಯನ್ನು ಸಾರುವ ಅಮರ ಕಾವ್ಯಗಳಾಗಿದೆ.

ಪ್ರೀತಿ ಮಹಿಮೆಯ ಚಿತ್ರ
ರೀತಿಯಂ ವಾಲ್ಮೀಕಿ ।
ನೀತಿ ಸೂಕ್ಷ್ಮದ ಗಹನ
ಮಾರ್ಗವಂ ವ್ಯಾಸರ್ ॥
ಗೀತೆಯಲಿ ವಿಶ್ವ ಜೀವನ ರಹಸ್ಯವನವರ್ ।
ಖ್ಯಾತಿಸಿಹರದು ಕಾವ್ಯ – ಮಂಕುತಿಮ್ಮ ॥

ದೈವಭಕ್ತಿ, ನಂಬಿಕೆಯ ಬಗ್ಗೆ ತಿಮ್ಮಗುರು ಲೋಕದ ನಡುವಳಿಕೆಯನ್ನು ಟೀಕಿಸಿದ್ದಾರೆ. ಆತ ದೈವದ ಮೇಲೆ ಪೂರ್ಣ ನಂಬಿಕೆಯನ್ನು ಇಡಲಾರ, ಪೂರ್ಣವಾಗಿ ಕೈ ಬಿಡಲಾರ. ಆತನ ಮನಸ್ಸಿನ ಡೋಲಾಯಮಾನ ಸ್ಥಿತಿ ಹೇಗಿರುವುದೆಂದರೆ ಸಿಂಬಳದ ನೊಣವಿದ್ದಂತೆ,

ನಂಬದಿರ್ದನು ತಂದೆ, ನಂಬಿದನು ಪ್ರಹ್ಲಾದ ।
ನಂಬಿಯುಂ ನಂಬದಿರುವಿಬ್ಬಂದಿ ನೀನು ॥
ಕಂಬದಿನೋ ಬಿಂಬದಿನೋ
ಮೋಕ್ಷವವರಿಂಗಾಯ್ತು ।
ಸಿಂಬಳದಿ ನೊಣ ನೀನು ಮಂಕುತಿಮ್ಮ ॥

ನಾಗರಿಕತೆ ಬೆಳೆದ ಹಾಗೆ ವ್ಯಕ್ತಿ ಹಳೆಯ ಮತ್ತು ಹೊಸತರ ಬಗ್ಗೆ ತನ್ನದೇ ಧೋರಣೆಯನ್ನು ಬೆಳಸಿಕೊಳ್ಳುತ್ತಿದ್ದಾನೆ. ಹಳೆಯದೆಲ್ಲವೂ ತ್ಯಾಜ್ಯ ಎಂದು ಹೊಸತೆಲ್ಲ ಗ್ರಾಹ್ಯವೆಂದು ಅವನ ಅಭಿಪ್ರಾಯವಾಗಿದೆ. ಕವಿ ಹಳತು ಹೊಸತರ ಬಗ್ಗೆ ಮಾನವನನ್ನು ಕಣ್ತೆರೆಯುವಂತೆ ಮಾಡಿ ತಿಳುವಳಿಕೆ ನೀಡಿದ್ದಾರೆ. ಯುಗಯುಗದ ಬೆಳಕಾಗಿ ಲೋಕವನ್ನು ಇಂದಿನವರೆಗೂ ನಡೆಸಿಕೊಂಡು ಬರುತ್ತಿರುವ ಬುದ್ಧ, ಕ್ರಿಸ್ತ, ಪರಮಹಂಸ, ವಿವೇಕಾನಂದ, ತತ್ತ್ವಗಳನ್ನು ಹಳೆಯದೆಂದು ನಿರಾಕರಿಸಲಾಗುತ್ತದೆಯೇ ? ನಮ್ಮ ಹೊಸ ತಿಳಿವಿಗೆ ಅವು ಅಡಿಪಾಯವೆಂದು ಎಚ್ಚರಿಸಿದ್ದಾರೆ.

ಹೊಸ ಚಿಗುರು ಹಳೆ ಬೇರು
ಕೂಡಿರಲು ಮರಸೊಬಗು
ಹೊಸಯುಕ್ತಿ ಹಳೆ ತತ್ತ್ವದೊಡಗೂಡೆ
ಧರ್ಮ
ಋಷಿ ವಾಕ್ಯದೊಡನೆ ವಿಜ್ಞಾನ ಕಲೆ
ಮೇಳವಿಸೆ
ರಸವು ಜನಜೀವನಕೆ – ಮಂಕುತಿಮ್ಮ ॥

ಮಾನವನಲ್ಲಿ ಹುದುಗಿರುವ ವಾಸನೆ ಅವನನ್ನು ಮೃಗವಾಗಿಸಿ ಪಾಪ ಕರ್ಮಗಳ ಪ್ರಪಾತಕ್ಕೆ ತಳ್ಳುವ ಅಸುರೀಶಕ್ತಿ. ಇದರ ಬಗ್ಗೆ ಕವಿ ಹೀಗೆ ಎಚ್ಚರಿಸಿದ್ದಾರೆ. ಆ ಕಾಲ ಸನ್ನಿಹಿತವಾದಾಗ ಬೇಸರಿಸದೆ, ಅಂಜದೆ, ಹಟ ಮಾಡದೆ ಹೊರ ಭಗವಂತನೂ ಮೆಚ್ಚುತ್ತಾನೆ ಎಂದಿದ್ದಾರೆ ತಿಮ್ಮ ಗುರು.

ಯಾತ್ರಿಕರು ನಾವು,
ದಿವ್ಯ ಕ್ಷೇತ್ರವೀ ಲೋಕ ।
ಸತ್ರದಲ್ಲಿ ನೇಮದಿಂದಲೆ ಕಡೆಯುಂಟು ॥

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | ಪ್ರಾ 7-30 | ಪ್ರಾ 8-00 |
| ಅರ್ಚನೆ (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | ಪ್ರಾ 8-00 | ಪ್ರಾ 8-30 |
| ಸರ್ವದರ್ಶನ | ಪ್ರಾ 9-00 | ಮ 12-30 |
| | ಮ 1-00 | ಸಂ 6-00 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

### ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | ,, | 40-00 |
| 3. | ಪುಳಿಯೋಗರೆ | ,, | 50-00 |
| 4. | ಪೊಂಗಲು | ,, | 55-00 |
| 5. | ಸಕ್ಕರೆಪೊಂಗಲ್ | ,, | 65-00 |
| 6. | ಶಾಕರ ಭಾತ್ | ,, | 85-00 |
| 7. | ಕೇಸರೀ ಭಾತ್ | ,, | 90-00 |
| 8. | ಸೀರ | ,, | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ರಾತ್ರಿ ಮೂರಾಯ್ತು ಹೊರಡೆನೆ
ತೆರಳಿದೊಡೆ, ಪಾರು–
ಪತ್ಯದವ ಮೆಚ್ಚುವನು – ಮಂಕುತಿಮ್ಮ ॥

ಮನುಷ್ಯ ಈ ಜಗತ್ತಿನಲ್ಲಿ ಹೇಗೆ ಬಾಳಬೇಕೆಂಬುದನ್ನು ತತ್ತ್ವ ಜ್ಞಾನಿಗಳು, ದಾರ್ಶನಿಕರು ಸವಿಸ್ತಾರವಾಗಿ ಚರ್ಚಿಸಿರುವ ಈ ನಿಗೂಢ ತತ್ತ್ವವನ್ನು ತಿಮ್ಮಗುರು ತುಂಬಾ ಸರಳ ಸುಂದರವಾಗಿ ನಿರೂಪಿಸಿದ್ದಾರೆ. ಅವರ ದೃಷ್ಟಿಯಲ್ಲಿ ಈ ಜಗತ್ತು ಭಗವಂತನ ನೆಲೆಯಾದ ದೇವಾಲಯ ಲೋಕದ ಜನರೆಲ್ಲ ಆತನ ಸೇವಕರು. ಆದ್ದರಿಂದ ಆಳು ತನ್ನ ಒಡೆಯನ ಮೆಚ್ಚುಗೆ ಗಳಿಸಬೇಕಾದರೆ ಅಹಂಕಾರವನ್ನು ತ್ಯಜಿಸಿ ವಿನಯವನ್ನು ಬೆಳಸಿಕೊಂಡು ಎಲ್ಲರೊಳೊಂದಾಗಿ ಬದುಕ ಬೇಕು.

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು ।
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ ॥
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ ।
ಎಲ್ಲರೊಳಗೊಂದಾಗು – ಮಂಕುತಿಮ್ಮ ॥

ತಿಮ್ಮಗುರು ತನ್ನ ಅನುಭಾವ ಕಾವ್ಯವನ್ನು ಭಗವಂತನಲ್ಲಿ ಶರಣು ಹೋಗುವುದರ ಮೂಲಕ ಮುಕ್ತಾಯಗೊಳಿಸಿದ್ದಾರೆ. ಮನುಷ್ಯ ಎಷ್ಟೇ ಬುದ್ಧಿಶಾಲಿಯಾಗಿ ಎಷ್ಟೇ ಶಕ್ತಿ ಸಾಮರ್ಥ್ಯಗಳನ್ನು ಗಳಿಸಿ ಪ್ರಕೃತಿಯ ಎಲ್ಲ ರಹಸ್ಯಗಳನ್ನು ಬಿಡಿಸುವ ಸಾಹಸ ಮಾಡುತ್ತಿದ್ದರೂ ಅವನಿಗೆ ಮೀರಿದ ಅಲೌಕಿಕ ಶಕ್ತಿಯೊಂದಿದೆ ಎಂಬುದು ಸತ್ಯ. "ತೃಣಮಪಿ ನ ಚಲತಿ ತೇನ ವಿನಾ" ಎಂಬುದನ್ನು ನಿಷ್ಠೆಯಿಂದ ನಂಬಿದಾಗ ಮಾನವ ಬದುಕಿಗೆ ಒಂದು ಗುರಿ ನೆಲೆ ಬರುತ್ತದೆ. ಸಮರಸವೀ ಜೀವನ ಎಂದು ತಿಳಿದು ಆತ್ಮ ಶಾಂತಿಯನ್ನು ದೊರಕಿಸುವಲ್ಲಿ ಭಗವಂತನಲ್ಲಿ ಶರಣು ಹೋಗುತ್ತಾನೆ.

ಆಶೆ ಮಂಥರೆ ನರ ವಿವೇಚನೆಯೆ ಕೈಕೇಯಿ ।
ಬೀಸೆ ಮನದುಸಿರು ಮತಿ ದೀಪವಲೆಯುವುದು॥
ವಾಸನೆಗಳನುಕೂಲ ಸತ್ಯತರ್ಕಕೆ ಶೂಲ ।
ಶೋಧಿಸಾ ವಾಸನೆಯ – ಮಂಕುತಿಮ್ಮ ॥

ವಿಧಿಯ ಕೈವಾಡದೆದುರು ಮನುಷ್ಯರು ಅಲ್ಪರು. ವಿಧಿಯಾಟವನ್ನು ಕವಿ ಅತಿ ಸಹಜವಾಗಿ ಹೇಳಿದ್ದಾರೆ.

ಬದುಕು ಜಟಕಾಬಂಡಿ,
ವಿಧಿಯದರ ಸಾಹೇಬ ।
ಕುದುರೆ ನೀನ್, ಅವನು
ಪೇಳ್ವಂತೆ ಪಯಣಿಗರು ॥
ಮದುವೆಗೋ ಮಸಣಕೋ
ಹೋಗೆಂದ ಕಡೆಗೋಡು ।
ಪದ ಕುಸಿಯೆ ನೆಲವಿಹುದು – ಮಂಕುತಿಮ್ಮ॥

ಇಷ್ಟಾದರೂ ತಿಮ್ಮಗುರುವಿನ ಉಪದೇಶವೆಂದರೆ ಜೀವನವನ್ನು ಎದುರಿಸಲಾರದೆ ಓಡುವುದು ತರವಲ್ಲ. ಹಾಗೆ ಓಡಿದರೆ ಬಿಧಿಯ ಬಾಯಿಗೆ ಕವಳವಾಗುತ್ತಾನೆ. ಎದೆಯನ್ನು ಉಕ್ಕಾಗಿಸಿ ವಿವೇಚನೆ ಎಂಬ ಗದೆ ಹಿಡಿದು ವಿಧಿಯನ್ನು ಎದುರಿಸಿದರೆ ವಿಧಿಯೂ ಸಹ ಮಾನವನಿಗೆ ಒಲಿಯುತ್ತದೆ.

ಕೀರ್ತಿಯ ಬೆನ್ನು ಹಿಡಿದು ಹೋಗುವುದು ಜನರ ಸ್ವಭಾವ. ಎಲ್ಲಾದರಾಗಲಿ, ಹೇಗಾದರಾಗಲಿ ತನ್ನ ಹೆಸರು ಮುಂದಾಗಬೇಕೆಂದು ತೊಳಲಾಡುತ್ತಾರೆ. ಮಾನವನ ಈ ಅರ್ಥ ಹೀನ ತೊಳಲಾಟವನ್ನು ತಿಮ್ಮಗುರು ಪ್ರಶ್ನಿಸಿದ್ದಾರೆ. ಅದಕ್ಕೆ ಉತ್ತರವನ್ನು ಕೊಡಲು ಪ್ರಯತ್ನಿಸಿದಾಗ ನಮ್ಮನ್ನು ಆವರಿಸುವ ಕೀರ್ತಿಯ ಭ್ರಮೆ ನಿರಸನವಾಗುತ್ತದೆ.

ಎದ್ದದ್ದು ಬೀಳುತಿಹೆ, ಗುದ್ದಾಡಿ ಸೋಲುತಿಹೆ ।
ಗದ್ದಲವ ತುಂಬಿ ಪ್ರಸಿದ್ಧನಾಗುತಿಹೆ ॥
ಉದ ರಿಸುವೆನು ಜಗವನೆನ್ನುತಿಹ ಸಖನೆ ನಿ ।
ನ್ನುದ್ಧಾರವೆಷ್ಟಾಯ್ತೊ – ಮಂಕುತಿಮ್ಮ ॥

ಬದುಕಿನ ಬಗ್ಗೆ ವಿಶೇಷ ಆಸಕ್ತಿ, ಅಂಟಿಕೊಂಡೇ ಉಳಿಯಬೇಕೆಂಬ ಆಶೆ, ಸಾವಿನ ಬಗ್ಗೆ ಅಂಜಿಕೆ ಮಾನವ ಸಹಜವಾದರೂ ಅವುಗಳನ್ನು ಹೋಗಲಾಡಿಸಿಕೊಂಡು ಬದುಕಿನ ಮುಕ್ತಾಯವೇ ಪರಮ ಭಾಗ್ಯವೆಂದು ತಿಳಿಯಬೇಕು.

ಶರಣವೋಗು ಜೀವನ
ರಹಸ್ಯದಲಿ ಸತ್ತ್ವದಲಿ ।
ಶರಣು ಜೀವನವ ಸಮವೆನಿಪ ಯತ್ನದಲಿ ॥
ಶರಣಂತರಾತ್ಮ ಗಂಭೀರ ಪ್ರಶಾಂತಿಯಲಿ ।
ಶರಣು ವಿಶ್ವಾತ್ಮದಲಿ – ಮಂಕುತಿಮ್ಮ ॥

'ಮಂಕುತಿಮ್ಮನ ಕಗ್ಗ' ಅಪಾರ ಜ್ಞಾನ ಮತ್ತು ಅನುಭವ ಸಂಪತ್ತುಗಳಿಂದ ಮೂಡಿ ಒಂದು ಶ್ರೇಷ್ಠ ಚಿಂತನ ಪರ ಕಾವ್ಯ. ಪರೀಕ್ಷಾ ಸಂದರ್ಭಗಳಲ್ಲಿ ನಮ್ಮ ನಡುವಳಿಕೆಯ ಬಗ್ಗೆ ವಿವೇಚನಾ ಸಹಿತ ತೀರ್ಮಾನ ಕೈಗೊಳ್ಳುವಾಗ ನಮ್ಮ ನೆನಪಿನಾಳದಲ್ಲಿ ಹುದುಗಿರುವ ಈ ಪದ್ಯಗಳು ಮತ್ತೆ ಮತ್ತೆ ಕಾಣಿಸಿಕೊಂಡು ಎಚ್ಚರಗೊಳಿಸುವ ಜೀವಂತ ಕಾವ್ಯ. ಹುಲ್ಲಿನಿಂದ ಹಿಡಿದು ಸೌರವ್ಯೂಹದ ವರೆಗೆ ವಿಶ್ವರೂಪ ದರ್ಶನದಂತೆ ಇಡೀ ಭೂಮಂಡಲ ರಚನಾ ರಹಸ್ಯವನ್ನು, ತೊಟ್ಟಿಲಿನಿಂದ ಮಸಣದವರೆಗೆ ಮಾನವ ಬದುಕಿನ ರೀತಿ ನೀತಿಗಳನ್ನು ನಮ್ಮ ಮುಂದಿರಿಸಿ, ಎಲ್ಲವನ್ನೂ ಒಣ ವೇದಾಂತ ದೃಷ್ಟಿಯಿಂದ ನೋಡದೆ ತೀರ ವಾಸ್ತವಿಕವಾದ ಸಾಮಾಜಿಕ ಸಂದರ್ಭದಲ್ಲಿ ತುಲನಾತ್ಮಕ ಅಧ್ಯಯನ ಮಾಡುವಂತೆ ಪ್ರೇರೇಪಿಸುವುದೇ ಈ ಕೃತಿಯ ವೈಶಿಷ್ಟ್ಯವಾಗಿದ್ದು ಕನ್ನಡದ ಅಮರ ಕೃತಿಗಳಲ್ಲಿ ಒಂದಾಗಿದೆ. ★

ಪರಿಚಯ

# ಆದಿತ್ಯಪುರಾಣದಲ್ಲಿ ರಾಮಾಯಣ

ಶ್ರೀಮದ್ರಾಮಾಯಣವು ಲೋಕೋತ್ತರ ಕೀರ್ತಿಯನ್ನು ಗಳಿಸಿದ ಮಹಾಕಾವ್ಯ. ಇದನ್ನು ಕನ್ನಡ ಭಾಷೆಯಲ್ಲಿ ಗದ್ಯ, ಪದ್ಯಗಳಾಗಿ ಬರೆದವರು ಹಲವರು ಇದ್ದಾರೆ. ಕುಮಾರ ವಾಲ್ಮೀಕಿಯೆಂದು ಬಿರುದಾಂಕಿತನಾದ ನರಹರಿ ಕವಿಯು ಪದ್ಯರೂಪವಾಗಿ ಬರೆದುದು 'ತೊರವೆ ರಾಮಾಯಣ'ವೆಂದು ಪ್ರಸಿದ್ಧಿ ಪಡೆದಿದೆ. ಅದೇ ರೀತಿ ನಾರಾಯಣ ಕವಿಯ 'ಉತ್ತರ ರಾಮಕಥೆ' ತಿಮ್ಮರಸನ 'ಮಾರ್ಕಂಡೇಯ ರಾಮಾಯಣ', ವೆಂಕನಾತ್ಯನ 'ಶ್ರೀರಾಮ ಕಥಾಭ್ಯುದಯ' ಮುಮ್ಮಡಿ ಸುಬ್ರಹ್ಮಣ್ಯ ಕವಿಯ 'ಹನುಮದ್ರಾಮಾಯಣ', ಸೋಸಲೆ ಅಯ್ಯಾಶಾಸ್ತ್ರಿಯ 'ಶೇಷರಾಮಾಯಣ' ಮೊದಲಾದುವುಗಳು ಕನ್ನಡದಲ್ಲಿವೆ. ಇನ್ನೂ ಹತ್ತಾರು ಬಗೆಯ ರಾಮಾಯಣ ಕಥೆಗಳು ಪ್ರಚಲಿತವಿದ್ದು ಕೆಲವಕ್ಕೆ ಒಮ್ಮೆಯೂ ಮುದ್ರಣ ಕಾಣುವ ಭಾಗ್ಯ ಬಂದಿಲ್ಲ. ಇತ್ತೀಚೆಗೆ ಸಮಗ್ರವಾಗಿ ಬಂದು ಜನಪ್ರಿಯತೆಯನ್ನು ಗಳಿಸಿದ ಕೃತಿ ಡಾ॥ ಕೆ. ವಿ. ಪುಟ್ಟಪ್ಪನವರ 'ಶ್ರೀರಾಮಾಯಣ ದರ್ಶನಂ'. ಈ ಎಲ್ಲಾ ಕೃತಿಗಳಲ್ಲಿಯೂ ಸ್ವಕೀಯವಾದ ಶೈಲಿಯಿಂದಲೂ, ವಿನೂತನ ಕಥಾ ಭಾಗಗಳ ಜೋಡಣೆಯಿಂದಲೂ, ಜನ ಪ್ರಿಯತೆಯನ್ನು ಕವಿಗಳು ಗಳಿಸಿ ಕೊಂಡಿರುವರು. ಲಕ್ಷ್ಮೀಶನ 'ಜೈಮಿನಿ ಭಾರತ' ಶರಜಾನಾಗಯ್ಯನ 'ಶುಕಸಪ್ತತಿ', ಕವಿರಾಜ ಕಂಠೀರವನ 'ಆದಿತ್ಯ ಪುರಾಣ' ದಂತಹ ಕಾವ್ಯಗಳಲ್ಲಿ ಕೂಡಾ ರಾಮಾಯಣದ ಕಥೆಗಳು ಆಂಶಿಕವಾಗಿ ಬಂದುದು ಗಮನಾರ್ಹವಾಗಿದೆ. ಕವಿರಾಜ ಕಂಠೀರವನು ಬರೆದ ಕನ್ನಡ 'ಆದಿತ್ಯ ಪುರಾಣ'ವು ಭಾಮಿನೀ ಷಟ್ಪದಿಯಲ್ಲಿದ್ದು ನಲ್ವತ್ತೆಂಟು ಸಂಧಿಗಳಿಂದ ಕೂಡಿದೆ. ಇದರ 24–27 ರವರೆಗಿನ ನಾಲ್ಕು ಸಂಧಿಗಳಲ್ಲಿ ರಾಮಾಯಣದ ಕಥೆಯನ್ನು ಸೂಕ್ಷ್ಮವಾಗಿ ಮತ್ತು ಕನ್ನಡದ ಇತರ ರಾಮಾಯಣಗಳಲ್ಲಿಲ್ಲದ ಕೆಲವು ಕೌತುಕಗಳನ್ನು ಸೇರಿಸಿಕೊಂಡು ಬರೆದಿರುವುದು ರಂಜನೀಯವಾಗಿದೆ. ಇತರ ರಾಮಾಯಣದ ಕಥೆಗಳಲ್ಲಿ ಇಂದ್ರಜಿತುವಿನ ವಧೆಗೆ ಹನ್ನೆರಡು ವರ್ಷ ಅನ್ನ, ನಿದ್ರೆ, ಸ್ತ್ರೀ ಸಂಗಗಳನ್ನು ತೊರೆದು ವ್ರತಮಾಡಿದವನು ಬೇಕೆಂದು ಹೇಳಿದ್ದರೂ ಇಲ್ಲಿ –

ವರುಷ ಹದಿನಾಲ್ಕುರೊಳುಪಾಸವ ।
ಧರಿಸಿದಾತನ ಕೈಯೊಳಲ್ಲದೆ ।
ಮರಣವಿಲ್ಲೆಂಬಿಂದ್ರಜಿತುವಿನ ಕೊಲಲು
ಸೌಮಿತ್ರಿ ॥
ಅರಿಕೆಯಾಯ್ತುಪವಾಸವೆಂಬುದು
ಧರಣಿಸಗೆ ರಘುರಾಮನಂತಃ
ಕರಣದಲಿ ಮರುಗಿದನು ತಮ್ಮನನು
ಬೋಳೈಸಿ ॥ ( 2–73 )

ಎಂದಿದೆ. ಇಂದ್ರಜಿತುವಿನ ವಧೆಗೆ ಹದಿನಾಲ್ಕು ವರ್ಷ ಉಪವಾಸವನ್ನು ಮಾತ್ರ ಹೇಳಲಾಗಿದೆ. ತನ್ನಿಂದಾಗಿ ಲಕ್ಷ್ಮಣನಿಗೆ ಅಪಾರ ಕಷ್ಟವಾಯ್ತೆಂದು ಶ್ರೀರಾಮನು ಜಾಂಬವಂತನಲ್ಲಿ ಹೇಳಿ ದುಃಖಿಸುವನು. ಆಗ ಜಾಂಬವನು 'ಜನರು ನಿಮಿತ್ತ ಮಾತ್ರರು; ಆಗು ಹೋಗುಗಳನ್ನು ನಿಂಯತ್ರಿಸುವ ದಿವ್ಯಶಕ್ತಿಯಿದೆ'ಯೆಂಬ ಉದಾತ್ತ ತತ್ತ್ವವನ್ನೂ ಉಪದೇಶಿಸುವ ಸುರಸ ಕಥಾಭಾಗವು ಬೇರೆ ಕಡೆ ಕಾಣುವುದಿಲ್ಲ.

ಪು. ಶ್ರೀನಿವಾಸಭಟ್, ಕಟೀಲು

ರಾವಣನ ವಧಾನಂತರ ಅಯೋಧ್ಯೆಗೆ ರಾಮನು ಮರಳಿದಾಗ ಅಲ್ಲಿಯ ಕೋಶಭಂಡಾರ ಬರಿದಾಗಿತ್ತು. ಭರತನು ಕಂದಾಯ ತೆಗೆದುಕೊಳ್ಳದಿದ್ದುದೇ ಕಾರಣವಾಗಿತ್ತು.

ಕರವನೆತ್ತದೆ ಊರ ಹೊರಗಾ
ಭರತ ನಿದ್ದನು ಕಾಸುವೀಸದ
ಕರದೊಳಿದ್ದುದು ಕೇಳಿ ರಘುಪತಿ
ಪ್ರಜೆಗಳನು ಕರೆದು
ಕರವನೀವುದೆನಲ್ಕೆ ಪ್ರಜೆಗಳು
ಕರವನಿತ್ತೆವು ಭರತಗೆಂದ
ಬ್ಬರಿಸಿ ಗುಬ್ಬಿಯ ಸಾಕ್ಷಿಗಳ
ನುಡಿಸಿದರು ಭೂಪತಿಗೆ ॥ (27–49)

ಭರತನು ಸತ್ಯಹೇಳಿದರೂ ಪ್ರಜೆಗಳು ತಾವು ತೆರಿಗೆ ಕೊಟ್ಟುದಾಗಿ ಹೇಳಿ ಸಾಕ್ಷಿಗೆ ಗುಬ್ಬಚ್ಚಿಗಳನ್ನು ಕರೆಸಿದರು. ಆದರೆ ಇದು ಸುಳ್ಳು ಎಂದು ತಿಳಿದಾಗ –

ಹುಸಿಯುನಾಡಿದವೆಂದು ಗುಬ್ಬಿಯ
ನೆಸೆವ ಸಂತತಿಗೂಡಿ ಹಾರುವ
ಗಸಣಿ ಬಂದುದಸತ್ಯವಾಗಿಂಗೆ
ಲೇಸು ಧರಣಿಯಲಿ
ಹುಸಿಯನಾಗಲಿ ದಿಟವನಾಗಲಿ
ಒಸೆದು ಸಾಕ್ಷಿಯ ನುಡಿದ ಬಳಿಕಾ
ಹುಸಿಕರಿಗೆ ಬಹುದೋಷವಲ್ಲದೆ ಕರ್ತಗಿಲ್ಲೆಂದ

'ಸುಳ್ಳು ಹೇಳಿದ ಗುಬ್ಬಿಗಳ ಕಾಲಿಗೆ ಸಂಕಲೆ ಹಾಕಿಸಿದ ಕಾರಣ ಗುಬ್ಬಿಗಳು ಇಂದಿಗೂ ಕುಪ್ಪಳಿಸಿಕೊಂಡು ಚಲಿಸುತ್ತವೆ' ಎಂಬ ಹೇಳಿಕೆ – ತುಳುನಾಡಿದ ಜಾನಪದ ಗೀತೆಯಲ್ಲೂ ಇದೆ.

ಇದರಲ್ಲಿರುವ ಇನ್ನೊಂದು ರೋಚಕವಾದ ಕಥೆ: ಶ್ರೀರಾಮನ ಬಳಿಕ ಅನುಕ್ರಮವಾಗಿ ಕುಶ, ಅತಿಥಿ, ನಿಷಧ, ನಳ, ನಭ ಮತ್ತು ಚಂದ್ರಲೋಕ ಎಂಬವರು ರಾಜ್ಯವಾಳುವರು. ಚಂದ್ರಲೋಕನ ಮಡದಿ ಸೀಮಂತಿನೀ ಎಂಬವಳು ವೈಧವ್ಯ ದುಃಖ ಪರಿಹಾರಾರ್ಥವಾಗಿ ಸೋಮವಾರ ವ್ರತ ನಡೆಸುತ್ತಿದ್ದಳು. ಪ್ರತಿ ದಿನ ಯೋಗ್ಯ ದಂಪತಿಗಳನ್ನು ಕರೆಸಿ ಪೂಜಿಸುತ್ತಿದ್ದಳು. ಒಮ್ಮೆ ದಾನದಕ್ಷಿಣೆಗಳ ಆಸೆಯಿಂದ ಇಬ್ಬರು ಬ್ರಾಹ್ಮಣಕುಮಾರರು, ಒಬ್ಬನು ಸ್ತ್ರೀ ವೇಷಧರಿಸಿ ದಂಪತಿಗಳಂತೆ ಬಂದು ಸೀಮಂತಿನಿಯಿಂದ ಪೂಜೆ ದಕ್ಷಿಣೆಗಳನ್ನು ಸ್ವೀಕರಿಸಿದರು.

ಬಂದವರ ಕಪಟವನು ಕಂಡಾ
ಚಂದ್ರಮುಖಿ ನಮಗಿವರೆ ಸಾಕ್ಷಾ
ದಿಂದುಧರ ಗಿರಿಜೆಯು
ರೆನುತ್ತರ್ಚಿಸುತ ಭಕ್ತಿಯಲಿ
ಮುಂದೆ ಕಳುಹಲು ನಾರಿ ಪೂರುಷ
ಲಂದವಾಗಿರಲವರವರ ತಾ
ಯ್ತಂದೆಗಳು ತಪದಿಂದ ಬಿನ್ನೈಸಿದರು
ಧೂರ್ಜಟಿಗೆ ॥ (27–62)

ಸತಿ ಸೀಮಂತೀನಿಯ ಶುದ್ಧ ಭಕ್ತಿಯಿಂದ ವೇಷಧಾರಿ ಬ್ರಾಹ್ಮಣನು ನಿಜ ಸ್ತ್ರೀಯಾಗಿದ್ದನು. ಅವನ ಹೆತ್ತವರು ಪರಮೇಶ್ವರನಲ್ಲಿ ಬೇಡಿದಾಗ ತನ್ನ ಭಕ್ತರಿಂದ ಅಧಿಕವಾದ ಪ್ರೀತಿಯವಸ್ತು ತನಗಿಲ್ಲ. ಸೀಮಂತಿಯನ್ನು ವಂಚಿಸಿರುವುದನ್ನು ತಾನು ಸಹಿಸಲಾರೆನೆಂದನು. ಅವನ ಸ್ತ್ರೀತ್ವವನ್ನು ಕಳೆಯಲು ಸರ್ವಥಾ ಒಪ್ಪಲಿಲ್ಲ;

ಹೀಗೆ ಕನ್ನಡ ಆದಿತ್ಯಪುರಾಣದಲ್ಲಿರುವ ಹಲವು ಅಪೂರ್ವ ವಿಚಾರಗಳಿವೆ.

ಆದಿತ್ಯಪುರಾಣವು ದಕ್ಷಿಣ ಕನ್ನಡ ಜಿಲ್ಲೆಯ ಸುರತ್ಕಲ್ಲಿನ 'ವಿಜಯ ಸಾಹಿತ್ಯ ಮಾಲೆ'ಯಲ್ಲಿ ಪೂರ್ಣವಾಗಿ ಪ್ರಕಟವಾಗಿದೆ. ಆಸಕ್ತ ರಸಿಕರು ಅದನ್ನು ಓದಿ ಇದರಲ್ಲಿರುವ ಇತರ ಕಥಾ ವೈಚಿತ್ರ್ಯಗಳನ್ನು ತಿಳಿಯಬಹುದು.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

**ಗಮನಿಕೆ :** ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾ ಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ಶ್ರೀ ವೆಂಕಟೇಶ ಸ್ತೋತ್ರ



ಶ್ರೀದೇವಿ ಕುಚತಟೀ ಸಿಂಧೂರದಿಂದ
ನಿತ್ಯವು ಕೆಂಪಾದ ನೀಲಾಢ್ಯದೇಹ!
ವಿಕಚಾರವಿಂದಾಕ್ಷ! ವಿಶ್ವಾಧಿನಾಥ!
ವಿಜಯೋಸ್ತು ನಿನಗೆ ಶ್ರೀವೃಷಶೈಲನಾಥ! 1

ಚತುರಾಸ್ಯ ಪಂಚಾಸ್ಯ ಷಣ್ಮುಖ ಪ್ರಮುಖ
ಮಹಿತಾಮರಶ್ರೇಣಿ ಮಸ್ತಕರತ್ನ!
ಶರಣೆಂದವರ ಕಾಯ್ವ ಸತ್ಕೃಪಾನಿಧಿಯೆ!
ಬಿಡದೆ ಪಾಲಿಸು ಎನ್ನ ವೃಷಶೈಲನಾಥ! 2

ಸಹಿಸಲಾಗದ ರೀತಿ ಸ್ವಚ್ಛಂದವಾಗಿ
ಹಲವಾರು ನಾ ಮಾಡಿದಪರಾಧ ಸಹಿಸಿ
ಮಾನ್ಯಾನುಕಂಪಾತ್ಮ! ಮನ್ನಿಸಿ ನನ್ನ
ಬೇಗ ಕಾಪಾಡಯ್ಯ ವೃಷಶೈಲನಾಥ! 3

ಔದಾರ್ಯನಿರತ! ಲೋಕಾಭೀಷ್ಟವರದ!
ನಿಗಮೋಕ್ತ ಚಾರಿತ್ರ್ಯ! ನಿಖಿಲ ದೇವೇಶ!
ಕಮಲೇಶ! ನಿನಗಿಂಥ ಕಲಿಯುಗದಲ್ಲಿ
ಬೇರಾರು ಶರಣಿಲ್ಲ ವೃಷಶೈಲನಾಥ! 4

ಸಿಹಿ ವೇಣುಗಾನಕ್ಕೆ ಚಿತ್ತಂಗಳರಳಿ
ಸುತ್ತುಮುತ್ತುವ ಗೋಪ ಸುಂದರೀಬೃಂದ
ಮನಮೆಚ್ಚೆ ಸುಖವೀವ ಮದನಕೋಟೀಶ!
ಶ್ರೀಹರಿ! ಗತಿನೀನೆ ವೃಷಶೈಲನಾಥ! 5

ಸ್ತವನೀಯ ಗುಣಧಾಮ! ದಶರಥರಾಮ!
ವಿಶ್ವೈಕ ವಿಕ್ರಮ! ವಿಪುಲ ಧೀರಾತ್ಮ!
ರಘುವಂಶಮಣಿ ದಯಾರಸಪೂರ್ಣಜಲಧಿ
ಬೇಡಿದಾ ವರನೀಡು ವೃಷಶೈಲನಾಥ! 6

ವಸುಧಾತ್ಮಜೆಗೆ ಮನೋವಲ್ಲಭನಾಗಿ
ಶಶಿಹೋಲ್ವ ಮುಖಪದ್ಮ ಸೌಂದರ್ಯ ಹೊಂದಿ
ಅಸುರಾಧಿಪ ತಮಸಿಗಾದಿತ್ಯನಾದ
ಶ್ರೀರಾಮ! ಸಲಹಯ್ಯ ವೃಷಶೈಲನಾಥ! 7

ಅಮಲಾಸ್ಯ ಶುಭಚಿತ್ತ ಆಶ್ರಿತೌದಾರ್ಯ
ಧನ್ಯಾನುಜರು ಶಿವದಾಯಕಾಮೋಘ
ಶರವುಳ್ಳ ರಘುವೀರ! ಸಂರಕ್ಷಿಸಯ್ಯ
ಇತರರ ಭಜಿಸೆನು ವೃಷಶೈಲನಾಥ! 8

ಸ್ವಾಮಿ! ನೀನಲ್ಲದೆ ಸಲಹುವವರಿಲ್ಲ
ಸತತವು ನಿನ್ನಯ ಜಪವ ಮಾಡುವೆನು
ದಯೆತೋರು ಪರಮಾತ್ಮ! ದಯೆತೋರು ಬೇಗ
ಇಷ್ಟಾರ್ಥಗಳ ನೀಡು ವೃಷಶೈಲನಾಥ! 9

ಬಳಲಿ ದೂರದಿ ಬಂದು ಭವದೀಯ ಚರಣ
ಕಮಲಂಗಳಲಿ ಬಿದ್ದು ಕೈಂಕರ್ಯ ಗೈವೆ
ನಿತ್ಯಸೇವೆಯ ಪುಣ್ಯ ನೀಡಯ್ಯ ಪ್ರಭುವೆ
ವಿರಳ ಸೇವೆಯ ಕೊಂಡು ವೃಷಶೈಲನಾಥ! 10

ಆಜ್ಞಾನಿಯಾದ ನಾನಪರಾಧವೆನಿತೊ
ಗೈದಿಹೆನು ಜಗದೀಶ! ಕರುಣಿಸಿ ನನ್ನ
ಪಾತಕಂಗಳನೆಲ್ಲ ಪರಿಹಾರ ಮಾಡಿ
ಪ್ರೀತಿಯೊಳು ರಕ್ಷಿಸೈ ವೃಷಶೈಲನಾಥ! 11

———

ಕನ್ನಡಾವತರಣ :
**ಶ್ರೀ ಜಿ. ಚೆನ್ನಯ್ಯ** ಎಂ.ಎ.

# ನೀನೆ ಗತಿಎಂದೆ

ರಾಗ–ಬಾಗೇಶ್ರೀ (ಉತ್ತರಾದಿ) ಆದಿತಾಳ

ಧರ್ಮದರುಶನದಿ | ನೋಡಲು ಬಂದೆ
ತಿರುಮಲೇಶನಿಜ | ಭಕುತರ ತಂದೆ ||ಪ||

ನಿರತಕೈಂಕರ್ಯ | ಕೃಪೆ ಮಾಡೆಂದೆ
ಪರಮಾನಂದಾನು | ಭವ ಕೊಡೆಂದೆ ||ಅ.ಪ||

**ಚರಣ**

ಸಹಸ್ರ ದೀಪಾಲಂಕಾರಕಂಡೆ |
ಉಂಜಲ್‌ಉಯ್ಯಾಲೆ ಮಹವುತ್ಸವ ಕಂಡೆ
ಕಲ್ಯಾಣ ಬ್ರಹ್ಮೋತ್ಸವಗಳ ಕಂಡೆ
ಶಾತ್ತುಮುರೈಸೇವೆ ಭಾಗ್ಯವೆಂದೆ ||೧||

ದುಡ್ಡಿರುವವರ ನೀ ದಾಸರಾಗಂದೆ |
ಕಡ್ಡಾಯ ಕಾಣಿಕೆ ಸಲಿಸಿ ನೀವೆಂದೆ
ಬಡ್ಡಿಕಾಸ ತಿಮ್ಮಪ್ಪಶೆಟ್ಟಿ ನಿಂದೇ
ಲಡ್ಡು ವಡೆಪ್ರಸಾದ ಕೊಳ್ಳೆಂದೆ ||೨||

ಪಾಪಿಷ್ಠರಪಾಪತೊಳೆವ ನೀನೆಂದೆ
ರೋಗಿಷ್ಠರ ತಾಪ ಕಳೆವ ನೀನೆಂದೆ
ಹರಿಹರರಮಾಯೆ ರೂಪನೀನೆಂದೆ,
ದೃಢಚಿತ್ತದಿಂದ ನಂಬಿರಿ ನೀವೆಂದೆ ||೩||

ಅಲಮೇಲುಮಂಗತಾಯಾರ ಕಂಡೆ |
ಏಕಾಂಗಿಯಾಗಿ ಏಕಿರುವಿರೆಂದೆ
ಕುಲಕಿಂತ ಗುಣಕೆ ಬೆಲೆಕೊಡಿರೆಂದೆ
ರಾಮಶೇಷನುತ ನೀನೆಗತಿ ಎಂದೆ

—ಶ್ರೀ ಬಿ. ಎಸ್. ರಾಮಾಚಾರ್



# ಗೃಹಲಕ್ಷ್ಮೀ



## ಹೆಳವನಕಟ್ಟೆ ಗಿರಿಯಮ್ಮ

ಭಕ್ತಿಯ ಶಕ್ತಿಯಿಂದ ಅಸಂಖ್ಯಾತ ರಸ ಭರಿತ ಕೃತಿಗಳನ್ನು ರಚಿಸಿ ಜನಪ್ರಿಯಳಾದ ಸಂತ ಕವಯಿತ್ರಿ ಎಂದ ತಕ್ಷಣ ನಮಗೆ ತಟನೆ ನೆನಪಾಗುವುದು ಉತ್ತರ ಭಾರತದ ಮೀರಾಬಾಯಿ. ಅವಳಂತೆಯೇ ಸಮರ್ಪಣಾಭಾವದ ಉತ್ತುಂಗ ಮಜಲನ್ನೇರಿ ಎದೆ ಮುಟ್ಟುವ ಭಾವಪೂರ್ಣ ಕೃತಿಗಳನ್ನು ರಚಿಸಿದ ಹೆಮ್ಮೆಯ ಕವಯಿತ್ರಿ ಕರ್ನಾಟಕದ ಹೆಳವನಕಟ್ಟೆ ಗಿರಿಯಮ್ಮ. ನಿರ್ಮಲ ಭಕ್ತಿಯ ಬುಗ್ಗೆಯನ್ನು ನಿರಂತವಾಗಿ ಚಿಮ್ಮಿಸಿ ಮಹಿಳಾಲೋಕದಲ್ಲಿ ರತ್ನಮಣಿಯಂತೆ ಪ್ರಜ್ವಲಿಸಿದ ಗಿರಿಯಮ್ಮ ಕರ್ನಾಟಕದ ಮೀರಾಬಾಯಿ ಎಂದೇ ಪ್ರಸಿದ್ಧಳಾಗಿದ್ದಾಳೆ.

ಸುಮಾರು ಇನ್ನೂರೈವತ್ತು ವರ್ಷಗಳ ಹಿಂದೆ ಕನ್ನಡನಾಡಿನ ಸಣ್ಣ ಊರೊಂದರಲ್ಲಿ ಬಾಳುವೆ ನಡೆಸಿ ಯಾವ ವಿಧವಾದ ಪ್ರತಿಷ್ಠೆ, ಪ್ರಭಾವ, ಕೀರ್ತಿಗಳಿಗೂ ಪ್ರಾಮುಖ್ಯತೆ ಕೊಡದೆ ಹೆಳವನ ಕಟ್ಟೆ ರಂಗನ ಸೇವೆಯಲ್ಲಿ ತನ್ನನ್ನು ತಾನು ಶ್ರೀಗಂಧದಂತೆ ತೇಯ್ದುಕೊಂಡ ಗಿರಿಯಮ್ಮನದು ಪುಳಕಿತಗೊಳಿಸುವಂಥಹ ಪರಿಶುದ್ಧ ಜೀವನ. ಎಲೆ ಮರೆಯ ಕಾಯಿಯ ಹಾಗೆ ಇದ್ದೂ ಇಲ್ಲದಂತೆ ಇದ್ದು, ಮುಂದಿನ ಜನಾಂಗ ಎಂದೆಂದಿಗೂ ಮರೆಯಲಾರದ ಉಪಕಾರವನ್ನು ಮಾಡಿ ಮಡಿದ ಮಹಾತ್ಮಳು ಅವಳು.

ಹೆಚ್ಚಾಗಿ ವಿದ್ಯಾಭ್ಯಾಸ ಮಾಡದಿದ್ದರೂ ಗಿರಿಯಮ್ಮ ಕನ್ನಡ ವಾಙ್ಮಯಕ್ಕೆ ಕೊಟ್ಟ ಕೊಡುಗೆ ಕಡಿಮೆಯದಲ್ಲ. ಅವಳು ಬರೆದ "ಚಂದ್ರಹಾಸನ ಕಥೆ, ಸೀತಾ ಕಲ್ಯಾಣ, ಕೃಷ್ಣ ಕೊರವಂಜಿ, ಬ್ರಹ್ಮ ಕೊರವಂಜಿ" ಮುಂತಾದ ಕೃತಿಗಳು ಹರಿದಾಸ ಸಾಹಿತ್ಯದಲ್ಲಿ ವಿಶಿಷ್ಟವಾದವು. ಈ ಕೃತಿಗಳು ದೀರ್ಘವಾಗಿದ್ದರೂ ಸರಳವಾದ ಶೈಲಿಯಿಂದ ತಮ್ಮನ್ನು ತಾವು ತೆರೆದು ಓದಿಸಿಕೊಳ್ಳುವ ಗುಣಗಳನ್ನು ಹೊಂದಿವೆ. ಗಿರಿಯಮ್ಮ ರಚಿಸಿರುವ ಹಾಡುಗಳೂ ತತ್ತ್ವದ ತಿರುಳಿನಿಂದ ಶ್ರೀಮಂತವಾಗಿದ್ದು ಓದುಗರಿಗೆ ಆತ್ಮೀಯವಾಗಿ ಆಪ್ಯಾಯಮಾನವಾತ್ತವೆ.

ಗಿರಿಯಮ್ಮ ಈಗಿನ ಧಾರವಾಡ ಜಿಲ್ಲೆಗೆ ಸೇರಿರುವ ರಾಣಿಬೆನ್ನೂರಿನವಳು. ಹುಟ್ಟಿನಿಂದಲೇ ದೈವಭಕ್ತಿಯನ್ನು ಮೈಗೂಡಿಸಿಕೊಂಡು ಹೊಳೆದ ಅವಳ ಗಂಡನ ಹೆಸರು ತಿಪ್ಪರಸ. ಅವರದು ಹರಿಹರದ ಹತ್ತಿರವಿರುವ ಮಲೆಬೆನ್ನೂರು. ಹೆಳವನಕಟ್ಟೆ ಮಲೆಬೆನ್ನೂರಿಗೆ ಸಮೀಪದ ರಂಗನಾಥ ಕ್ಷೇತ್ರ ಇಲ್ಲಿನ ರಂಗನಾಥಸ್ವಾಮಿಯೇ ಗಿರಿಯಮ್ಮನ ಆರಾಧ್ಯ ದೈವ. "ಹೆಳವನಕಟ್ಟೆರಂಗ" ಎಂಬ ಅಂಕಿತದಿಂದ ಗಿರಿಯಮ್ಮ ಸಾಸಿರಾರು ಕೃತಿಗಳನ್ನು ರಚಿಸಿದ್ದಾಳೆ. ಸಖ್ಯ ಭಾವದ, ಪುತ್ರ ವಾತ್ಸಲ್ಯದ ಕೊಡಿಲನ್ನು ಹರಿಸಿದ್ದಾಳೆ. ಹೆಳವನ ಕಟ್ಟೆ ರಂಗನೂ ಗಿರಿಯಮ್ಮನ ಸಖನಾಗಿ, ಸುತನಾಗಿ, ತಂದೆಯಾಗಿ ಅನೇಕ ಮಹಿಮೆಗಳನ್ನು ತೋರಿಸಿದ್ದಾನೆ.

ಹೆಳವನಕಟ್ಟೆ ರಂಗನಾಥನಿಗೂ ಗಿರಿಯಮ್ಮನಿಗೂ ಯಾವ ಜನ್ಮದ ಅನುಬಂಧವಿತ್ತೋ ತಿಳಿಯದು. ಒಟ್ಟಿನಲ್ಲಿ ಆ ಕ್ಷೇತ್ರ ಅವಳನ್ನು ಪೂರ್ಣವಾಗಿ ಆಕರ್ಷಿಸಿಬಿಟ್ಟಿತು. ಅಲ್ಲಿನ ರಂಗನಾಥಸ್ವಾಮಿಯ ದರ್ಶನ ಮಾತ್ರದಿಂದಲೇ ಅವಳು ಪುಳಕಿತಾಂಗಳಾಗುತ್ತಿದ್ದಳು. ಭಾವೋದ್ವೇಗದ ಪರಮಾವಧಿಯಲ್ಲಿ ಭಕ್ತಿರಸದ ಕಾರಂಜಿ ಅವಳಲ್ಲಿ ಆಗ ಪುಟಿದೇಳುತ್ತಿತ್ತು. ಗಿರಿಯಮ್ಮ ಪರವಶಳಾಗಿ ಸ್ವಾಮಿಯ ಮೇಲೆ ಕೀರ್ತನೆಗಳನ್ನು ರಚಿಸಿ ಅವನ ಗುಣಗಾನ ಮಾಡುತ್ತಿದ್ದಳು.

ಗಿರಿಯಮ್ಮ ಪ್ರತಿ ದಿನವೂ ಹೇಳವನ ಕಟ್ಟೆ ಕ್ಷೇತ್ರಕ್ಕೇ ಹೋಗಿ ರಂಗನಾಥನ ದರ್ಶನ ಪಡೆಯುತ್ತಿದ್ದಳು. ಸ್ವಾಮಿಯ ಮುಂದೆ ತಾಸುಗಟ್ಟಲೆ ಧ್ಯಾನ ಭಂಗಿಯಲ್ಲಿ ಕುಳಿತು ಬೇಡುತ್ತಿದ್ದಳು. ಅವಳ ಅತ್ತೆಮಾವಂದಿರಿಗೆ ಮೊದಮೊದಲು ಗಿರಿಯಮ್ಮನ ಈ ವಿಪರೀತ ಭಕ್ತಿ ಹಿಡಿಸುತ್ತಿರಲಿಲ್ಲ. ಅವರು ಗಿರಿಯಮ್ಮನಿಗೆ ಹೆಳವನಕಟ್ಟೆಗೆ ಹೋಗದಿರುವಂತೆ ತಡೆ ಹಾಕಿದರು. ಆದರೆ ಗಿರಿಯಮ್ಮನ ಸದೃಢ ಭಕ್ತಿಯ ಶಕ್ತಿಗೆ ಯಾವ ಅಡೆ ತಡೆಯೂ ನಿಲ್ಲದಾಯಿಯಿತು. ಅವಳ ನಿರ್ಮಲ ಮನಸ್ಸು. ನಿಷ್ಕಳಂಕ ಭಾವನೆಗಳನ್ನು ಕಂಡು ಅತ್ತೆ-ಮಾವಂದಿಯರು ಪರಿವರ್ತನೆಗೊಂಡರು.

ಹರಿದಾಸ ಶ್ರೇಷ್ಠರಾದ ಶ್ರೀ ಗೋಪಾಲ ದಾಸರು ಗಿರಿಯಮ್ಮನ ಸಮಕಾಲೀನರು. ಅವರು ಒಮ್ಮೆ ಹೆಳವನಕಟ್ಟೆ ಕ್ಷೇತ್ರಕ್ಕೆ ಭೇಟಿ ಕೊಟ್ಟಿದ್ದಾಗ ಗಿರಿಯಮ್ಮನ ಹಿರಿಮೆಯನ್ನು ಮನಗಂಡು ಅವಳಿಗೆ ಉಪದೇಶ ಮಾಡಿದ್ದರು. ಅವರ ಅವರ ಉಪದೇಶಾಮೃತದಿಂದ ಗಿರಿಯಮ್ಮನ ಸಾಧನಾಮಾರ್ಗ ಸ್ಪಷ್ಟವಾಯಿತು. ಗುರಿ ಗೋಚರವಾಯಿತು.

ತೇಯುತ್ತಿದ್ದರೂ ಗಂಧದ ಪರಿಮಳ ಮಿಗಿಲಾಗುವಂತೆ ಗಿರಿಯಮ್ಮನ ಭಕ್ತಿಯ ಶಕ್ತಿ ದಿನ ದಿನಕ್ಕೂ ಹೆಚ್ಚು ಹೆಚ್ಚು ಉಜ್ಜ್ವಲವಾಗ ತೊಡಗಿತು. ದೀನದಲಿತರನ್ನು ವಾತ್ಸಲ್ಯ ಅನುಕಂಪಗಳಿಂದ ನೋಡುತ್ತಿದ್ದ ಕಾರಣ ಅವಳು ಬಹು ಬೇಗ ಜನಗಳ ವಿಶ್ವಾಸಕ್ಕೆ ಪಾತ್ರಳಾದಳು. ನಿಸ್ಸಹಾಯಕರಾಗಿ ನರಳುತ್ತಿದ್ದ ಜನಗಳ ಪರವಾಗಿ ಅವಳು ದೇವರನ್ನು ಪ್ರಾರ್ಥಿಸಿ ಅವರ ತೊಂದರೆ ತೊಡಕುಗಳನ್ನು ಹೋಗಲಾಡಿಸುತ್ತಿದ್ದಳು. ಅಸಮಾನ ವೆನಿಸಿರುವ ಅನೇಕ ಪವಾಡ ಸದೃಶ ಘಟನೆಗಳು ಈ ಕಾರಣವಾಗಿಯೇ ಅವಳಿಂದ ಪ್ರಕಟಿತವಾದವೆಂಬ ಪ್ರತೀತಿ ಇದೆ.

**ಜಯಸಿಂಹ**

ಗಿರಿಯಮ್ಮ ರಚಿಸಿದ ಕೃತಿಗಳು ಅವಳು ಕಣ್ಮರೆಯಾಗಿದ್ದರೂ ಅವಳ ಧೀಮಂತ ವ್ಯಕ್ತಿತ್ವವನ್ನು ಸದಾ ಎತ್ತಿ ತೋರಿಸುವಂತಹ ಮಣಿ ದೀಪವಾಗಿ ಬೆಳಗುತ್ತಿವೆ. ಗಿರಿಯಮ್ಮನ ತಿಳಿಯಾದ ಭಾಷಾ ಶೈಲಿ, ಭಕ್ತಿಯ ನವುರಾದ ಮೋಹಕ ಆವರಣದಲ್ಲಿ ತತ್ತ್ವದ ತಿರುಳು ಸುಂದರವಾಗಿ ಅಡಕವಾಗಿರುವುದನ್ನು ಅವಳ ಬಹುತೇಕ ಎಲ್ಲಾ ಕೃತಿಗಳಲ್ಲೂ ಗಮನಿಸ ಬಹುದು.

ರಂಗನಾಥನ ಮುಂದೆ ಮನದಳಲನ್ನು ತೋಡಿಕೊಂಡು –

ಪಾಪಿಯೊಲು ನಾ ಬಂದೇ
ಸಂದೇಹಿ ನಾನಾದೆ
ಕಾಪಾಡುವವರ ಕಾಣೆ ಕೈಪಿಡಿ
ಆಪತ್ತು ಬಂದಕಾಲಕ್ಕೆ
ಕಾಯುವ ರೊಬ್ಬರಿಲ್ಲ
ಶ್ರೀಪತಿಯೇ ಕಡೆಹಾಯಿಸೋ
ತಂದೆ ತಾಯೆಂಬುದನು ನಾನೊಂದು
ಗುರುತನರಿಯೆ ನಿಮ್ಮ ಕಂದಳೆಂದೆನಿಸಿ
ಕಡೆಹಾಯಿಸೋ ಹೆಳವನ ಕಟ್ಟೇ ರಂಗ ||

ಎಂದು ಪಶ್ಚಾತ್ತಾಪದಲ್ಲಿ ಹೆಪ್ಪುಗಟ್ಟಿದ ಕಳಕಳಿಯನ್ನು ವ್ಯಕ್ತಪಡಿಸುತ್ತಾಳೆ.

ಸಾರಿ ಹೇಳುವೆ ಎನ್ನಯ ಬಳಗದ
ಅಣಭಾರ ನಿನ್ನದು
ಹೇರೊಪ್ಪಿಸಿದ ಮೇಲೆ ಯಾತರ
ಸುಂಕವು
ಕಾರುಣ್ಯನಿಧಿ ಹೆಳವನಕಟ್ಟೆ
ರಂಗಯ್ಯಾ

ಎಂಬ ಸಾಲುಗಳು ಅವಳ ಪ್ರೌಢವಾದ ಚಿಂತನೆಯನ್ನು ಸಮರ್ಥವಾಗಿ ಪ್ರತಿಬಿಂಬಿಸುತ್ತವೆ. ಹೀಗೇ ಗಿರಿಯಮ್ಮ ಬರೆದ "ಭಕ್ತವತ್ಸಲನೆಂಬ ಬಿರುದು ಬಿಡದಿರು, ಕಂಡೆನೀಗ ರಂಗನಾಥನ, ನಿನ್ನ ನಂಬಿದವರ ಕಾಯೋ, ಪದುಮನಾಭನೆ ನಿನ್ನ" ಮುಂತಾದ ಕೀರ್ತನೆಗಳು ಅವಳ ಅಂತರಂಗದ ಪದರಪದರವನ್ನು ಬಿಡಿಸಿ ತೋರಿಸಿ ಅವಳ ವ್ಯಕ್ತಿತ್ವವನ್ನು ಪ್ರತಿಭಾ ಶಕ್ತಿಯನ್ನು ಪ್ರತಿಫಲಿಸುತ್ತವೆ.

ಗಿರಿಯಮ್ಮ ತನ್ನ ಅಂತ್ಯಕಾಲವನ್ನು ಹೊನ್ನಾರೆಯ ಬಳಿಯಿರುವ ಕವಮ್ಮಾರಗಟ್ಟೆ ಗ್ರಾಮದಲ್ಲಿ ಕಳೆದಳೆಂದು ಹೇಳುತ್ತಾರೆ. ಅಲ್ಲಿನ ತುಂಗಭದ್ರಾನದಿಯಲ್ಲಿ ಐಕ್ಯಳಾದಳೆಂಬ ಪ್ರತೀತಿ ಯಿದೆ.

ಜೀವನದ ಒಂದೊಂದು ಕ್ಷಣವನ್ನೂ ಹೆಳವನಕಟ್ಟೆ ರಂಗಯ್ಯನ ಚರಣ ಸ್ಮರಣೆಯಲ್ಲಿ ಕಳೆದು ತನ್ನ ಪ್ರತಿಭೆಯಿಂದ ಕನ್ನಡ ಸಾಹಿತ್ಯ ಭಂಡಾರವನ್ನು ತುಂಬಿ ಕಣ್ಮರೆಯಾದ ಗಿರಿಯಮ್ಮ ಹೆಣ್ಣು ಮಕ್ಕಳಿಗೆ ಆದರ್ಶಳಾಗಿದ್ದಾಳೆ. ಅವಳ ಬದುಕು ಈಗಲೂ, ಯಾವಾಗಲೂ ಕರ್ನಾಟಕದ, ಭಾರತದ ಸ್ತ್ರೀಯರಿಗೆ ಬೆಳಕಿನ ಹಾದಿಯನ್ನು ತೋರಿಸುತ್ತಿದೆ.

———

(6 ನೇ ಪುಟದಿಂದ)

ಜಾಲಂಧ್ರದಲ್ಲಿ ಮಯೂರವಾಹನನಾದ ಸುಬ್ರಹ್ಮಣ್ಯನನ್ನು ಕಡೆದಿಡಲಾಗಿದೆ.

ಭೋಗನಂದೀಶನ ನವರಂಗದ ಉತ್ತರ ಜಾಲಂಧ್ರವು ದೈತ್ಯಾಕಾರದ ಮಾನವನಿಂದ ಕೂಡಿದ್ದರೆ, ದಕ್ಷಿಣದ್ದು ಅರುಣಾಚಲನ ದಕ್ಷಿಣದ ಜಾಲಂಧ್ರವನ್ನೇ ಹೋಲುತ್ತದೆ. ಸುಖನಾಸಿಯ ಉತ್ತರದ ಕಡೆಯ ಜಾಲಂಧ್ರವು ಎಮ್ಮೆಯ ತಲೆಯನ್ನು ಮೆಟ್ಟನಿಂತ ಮಹಿಷಾಸುರ ಮರ್ದಿನಿಗಾಗಿ ಇರಿಸಲಾಗಿದೆ. ಇದೊಂದು ಅಪರೂಪದ ಆಕರ್ಷಣೀಯವಾದ ಕೆತ್ತನೆಯೆನ್ನಬಹುದು. ಇಲ್ಲಿನ ದಕ್ಷಿಣ ದಿಕ್ಕಿನ ಜಾಲಂಧ್ರವು ಅರುಣಾಚಲ ದೇವಾಲಯದ್ದನ್ನೇ ಹೋಲುತ್ತದೆ. ಕಲ್ಯಾಣಮಂಟಪದ ಹಿಂದಿರುವ ಗೋಡೆಯ ಮೇಲಿನ ಜಾಲಂಧ್ರಗಳು ಯಾಳಿಯಮೇಲೆ ನಿಂತಿರುವ ಇಬ್ಬರು ಮಾನವಾಕೃತಿಗಳಿಂದ ಕೂಡಿರುವುದಾಗಿವೆ.

ಇಲ್ಲಿನ ಜಾಲಂಧ್ರಗಳು ಕಿಟಕಿಗಳಂತೆ ರಂಧ್ರಗಳನ್ನು ಕೊರೆದು ಮಾಡಿರುವುದಲ್ಲ, ಇದೊಂದು ವೈಶಿಷ್ಟ್ಯಪೂರ್ಣವಾದದ್ದು. ಪ್ರತಿಯೊಂದರಲ್ಲೂ ಮೂರ್ತಿಗಳನ್ನಿಟ್ಟು ಉಚಿತವಾದ ಕಡೆ ರಂಧ್ರಗಳನ್ನು ಕೊರೆದು ಬೆಳಕು ಒಳಗೆ ತೂರಿಬರುವಂತೆ ವ್ಯವಸ್ಥೆ ಮಾಡಲಾಗಿರುವುದು. ಆದ್ದರಿಂದಲೇ ಇಲ್ಲಿನ ಜಾಲಂಧ್ರಗಳು ವಿಶೇಷ ಅಭ್ಯಾಸಕ್ಕೆ ಕಾರಣವಾಗಿರುವುದು.

ಇಲ್ಲಿರುವ ನಂದಿಮಂಟಪಗಳು, ಮುಖಮಂಟಪ, ವಸಂತ ಮಂಟಪ, ತುಲಾಭಾರ ಮಂಟಪಗಳು ಬೇರೆ ಬೇರೆ ಆಕಾರದ ಕೆತ್ತನೆಯ ಕಂಬಗಳಿಂದ ಕೂಡಿ ನೋಡಲು ಆಕರ್ಷಣೀಯವಾಗಿವೆ. ಇಲ್ಲಿರುವ ಒಂದು 'ಕಲ್ಲಿನ ಕೊಡೆ' ನಮ್ಮ ಗಮನವನ್ನು ಸೆಳೆಯುತ್ತದೆ. ಮುಖಮಂಟಪದಲ್ಲಿರುವ ಇದು 5 ಅಡಿ ಅಗಲವಾಗಿದ್ದು (ಕೊಡೆಯ ಅಳತೆ) 10 ಅಡಿಗಳಷ್ಟು ಎತ್ತರವಾಗಿದೆ. ಇದಕ್ಕೆ ಒಳಗಿರುವ ಕಂಬದ ಸುತ್ತಳತೆ 1½ ಅಡಿಯಷ್ಟಿದೆ. ಚೌಕಾಕಾರದ 'ಶೃಂಗಿತೀರ್ಥ'ವೆಂಬ ಕೊಳವು ಇಲ್ಲಿದೆ. ದಕ್ಷಿಣ ಪಿನಾಕಿನೀ ನದಿಯು ಇಲ್ಲಿಂದ ಹರಿಯುತ್ತದೆಂದು ಹೇಳುತ್ತಾರೆ.

ನಂದಿಯಲ್ಲಿ ಶಿವರಾತ್ರಿಯ ದಿನದಂದು ಜಾತ್ರೆ ನಡೆಯುತ್ತದೆ. ಒಂದು ಪಕ್ಷದಕಾಲ ನಡೆಯುವ ಈ ಜಾತ್ರೆಗೆ ಪ್ರಾಂತದ ಅನೇಕ ಕಡೆಗಳಿಂದ ಉತ್ತಮವಾದ ದನಗಳು ಬಂದು ಸೇರುತ್ತವೆ. ರಾಸುಗಳಿಗೆ ಬಹುಮಾನಗಳನ್ನು ನೀಡುವ ಆಕರ್ಷಣೆ ನಡೆಯುತ್ತದೆ. ಈ ಪ್ರಾಂತದಲ್ಲಿಯೇ ಪ್ರಸಿದ್ಧವಾದ ಮೌಲಿಕವಾದ ದನಗಳ ಸಮಾವೇಶ ಇಲ್ಲಿ ನಡೆಯುತ್ತದೆಂದು ಹೇಳಬಹುದು.

ಬಾಣವಿದ್ಯಾಧರನ ಹೆಂಡತಿ ರತ್ನಾವಳಿಯ ಮೂಲಪ್ರೇರಣೆಯಿಂದ ಹುಟ್ಟಿ, ಪಲ್ಲವರ ದೇವಾಲಯ ರಚನೆಯ ಆಸಕ್ತಿಯಿಂದ ಅರಳಿ, ಚೋಳರ ಆರಾಧನೆಯ ಪ್ರಾಮುಖ್ಯತೆಯ ಕಾಯಾಗಿ, ಹೊಯ್ಸಳ ಶೈಲಿಯ ಪರಿಪಕ್ವತೆಯನ್ನು ಪಡೆದಿರುವ ನಂದಿಗ್ರಾಮದ ದೇವಾಲಯವೊಂದು ಶಿಲ್ಪಕಲಾವೈಭವದ 'ಮಹಾವೃಕ್ಷ'. ಇದರ ಆಶ್ರಯವೇ ನಮ್ಮ ನಾಗರಿಕತೆ ಸಂಸ್ಕೃತಿಯ ವಿಕಾಸ, ಇದರೊಂದಿಗಿನ ಸರಿಬಾಳ್ವೆಯೇ ಭರವಸೆಯ ಗಟ್ಟನೆಲದ ಬದುಕಿನ ಮೀಮಾಂಸ. ★

# ವಾಚಕ್ನವೀಗಾರ್ಗಿ

ಶಕ್ತಿ ಸ್ವರೂಪಿಣಿಯಾದ ಸ್ತ್ರೀಯನ್ನು ಮಾತೆಯೆಂದು ಮಮತೆಯಿಂದ ಗೌರವಿಸಿದ ದೇಶ ಭಾರತ ದೇಶ. "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ" ಎಂದು ಮನುವು ಸ್ತ್ರೀಯರಿಗೆ ಸಲ್ಲುವ ಪೂಜೆ ದೇವತೆಗಳ ಸಂತೃಪ್ತಿಗಾಗಿ ಎಂದು ಹೇಳಿದ್ದಾನೆ. "ಮಾತೃವತ್ ಪರದಾರಾಣಿ" ಎಂದೂ "ನಮಾತುಃ ಪರದೈವತಂ" ಎಂದು ಸ್ಮೃತಿಯ ನಿರ್ದೇಶ.

ವೇದಾಂತ, ಧರ್ಮಶಾಸ್ತ್ರ, ಸಾಹಿತ್ಯಗಳಲ್ಲಿ ತಮ್ಮ ವೈದುಷ್ಯದಿಂದಲೂ ಪ್ರತಿಭೆಯಿಂದಲೂ ಪ್ರಸಿದ್ಧರಾಗಿ, ಶಂಕರಾಚಾರ್ಯರೊಂದಿಗೆ ಸರಿಸಮನಾಗಿ ವಾದ ಮಾಡಿದ ಉಭಯಭಾರತಿ, ಭೋಜರಾಜ–ವಿಕ್ರಮಾರ್ಕನ ಹೆಂಡತಿ ಶೀಲವತಿ; ಪ್ರಖ್ಯಾತ ಸಂತ ತುಳಸಿದಾಸರಿಗೆ ಗುರುವಾಗಿ ಪರಿಣಮಿಸಿದ ಅವರ ಹೆಂಡತಿ ಮಮತಾ; ಮಹಾಕವಿ ಮಯೂರ ಭಟ್ಟನ ಮಗಳಾದ ಮಹಾವೈಯಾಕರಣಿ ಯೆಂದೆನಿಸಿದ ಮತ್ತು ತನ್ನ ಗಂಡನ 'ಆನಂದ ಲತಿಕಾ' ಎಂಬ ಚಂಪೂ ಗ್ರಂಥದ ರಚನೆಯಲ್ಲಿ ಪಾಲ್ಗೊಂಡ ವೈಜಯಂತೀ; ಜಯಚಂದ್ರ ರಾಜನ ಮಗಳೂ ಪೃಥ್ವೀರಾಜನ ಹೆಂಡತಿಯೂ ಆಗಿದ್ದು ಧರ್ಮಶಾಸ್ತ್ರ ವಿಶಾರದೆಯಾಗಿದ್ದ ಸಂಯುಕ್ತೆ; ಶಿವರಾಮ ದೀಕ್ಷಿತರ ಮಗಳು ಕವಯಿತ್ರಿ ಪ್ರಿಯಂವದೆ; ಇಂದ್ರೇಶ್ವರ ಚೂಡಾಮಣಿಯ ಮಗಳು ವ್ಯಾಕರಣ ವಿಶಾರದೆ ಮಾನಿನೀ; ಮಧ್ವಾಚಾರ್ಯರ ತಂಗಿ ಕಲ್ಯಾಣಿದೇವಿ; ಶಂಕರ ವೇದಾಂತದಲ್ಲಿ ಧ್ರುವತಾರೆಯಾದ ಭಾಮತೀಕಾರ ವಾಚಸ್ಪತಿಮಿಶ್ರನ ಹೆಂಡತಿ ಭಾಮತಿ; – ಇಂತಹ ಸ್ತ್ರೀ ಜನಾಂಗದ ವನಿತೆಯರು ನಮ್ಮ ಹಿಂದೂ ಧರ್ಮ, ಸಂಸ್ಕೃತಿಯನ್ನು ಬೆಳಗಿ ತೊಳಗ ಬಲ್ಲ ಪ್ರಚಂಡ ಶಕ್ತಿವುಳ್ಳವರು. ವೇದ ವಿದ್ಯೆಯನ್ನು ಕರತಲಾಮಲಕವಾಗಿ ಕೊಂಡಿದ್ದ ಮೈತ್ರೇಯಿ, ಬ್ರಹ್ಮಜ್ಞಾನಿ ವಾಚಕ್ನವೀಗಾರ್ಗಿ, ಘೋಷಾ, ಲೋಪಾಮುದ್ರೆ, ಮೈತ್ರೇಯಿ, ಅಪಾರ ಮನ್ನಣೆ ಪಡೆದಿದ್ದ ಸ್ತ್ರೀರತ್ನಗಳು. ವಾಚಕ್ನವೀಗಾರ್ಗಿ ಯನ್ನು ಕುರಿತು ಪರಿಶೀಲಿಸೋಣ.

ಬ್ರಹ್ಮಜ್ಞಾನಿ ಗಾರ್ಗಿ, ವೇದ ವಾದಿನಿ. ಜನಕ ಮಹಾರಾಜನ ಬಹುದಕ್ಷಿಣ ಯಾಗದಲ್ಲಿ ಭಗವಾನ್ ಯಾಜ್ಞವಲ್ಕ್ಯರ ದಿಟ್ಟತನವನ್ನು ಮೆಚ್ಚಿಕೊಂಡು ಅವರೊಡನೆ ಆಧ್ಯಾತ್ಮ ವಿಷಯಗಳ ಕಠಿಣ ತಮವಾದ ವಾದವನ್ನು ನಡೆಯಿಸಿ "ಇವರೇ ನಿಜವಾದ ಸರ್ವೋತ್ತಮ ಹಾಗೂ ನಿಷ್ಠಾವಂತ ಬ್ರಹ್ಮಜ್ಞಾನಿಗಳು" ಎಂದು ಅಂತಿಮ ನಿರ್ಣಯವನ್ನಿತ್ತವಳು.

'ಗಾರ್ಗಿ' ಇವಳನ್ನು 'ವಾಚಕ್ನವೀಗಾರ್ಗಿ' ಎಂದು ಕರೆಯುವರು. ಗರ್ಗ ವಂಶದ ವಚಕ್ನು ಮಹರ್ಷಿಯ ಮಗಳಾದುದರಿಂದ ಈ ಬ್ರಹ್ಮವಾದಿನಿಗೆ "ವಾಚಕ್ನವೀ ಗಾರ್ಗಿ" ಎಂಬ ಹೆಸರು ಬಂದಿದೆ. ಜನಕ ರಾಜರ್ಷಿಯ ವಿದ್ವತ್ಸಭೆಯನ್ನು ಅಲಂಕರಿಸಿದ್ದಳು ಈ ಸ್ತ್ರೀರತ್ನ. ಬೃಹದಾರಣ್ಯಕೋಪನಿಷತ್ತಿನಲ್ಲಿ ನಡೆದ ಶಾಸ್ತ್ರಾರ್ಥ ವಾದ ವಿವರವಾಗಿ ಈ ರೀತಿ ಇದೆ.

ಒಮ್ಮೆ ಮಿಥಿಲೆಯ ನೃಪತಿಯಾದ ಜನಕನಿಗೆ, "ಪ್ರಪಂಚದಲ್ಲಿ ಶ್ರೇಷ್ಠ ಬ್ರಹ್ಮಜ್ಞಾನಿಯಾರು?" ಎಂಬುದನ್ನು ಅರಿಯಬೇಕೆಂಬ ಆಸೆಯುಂಟಾಗುತ್ತದೆ. ವಿದ್ವದ್ವರೇಣ್ಯರನ್ನು ಕಲೆಹಾಕುವ ಸಲುವಾಗಿ, ಬಹುದಕ್ಷಿಣಾ ಯಾಗವೊಂದನ್ನು ಅನುಷ್ಠಿಸುವುದಾಗಿ ಘೋಷಿಸುತ್ತಾನೆ. ಈ ಪವಿತ್ರ ವಾದ ಯಾಗಾಂತ್ಯದಲ್ಲಿ ಶ್ರೇಷ್ಠ ಬ್ರಹ್ಮಜ್ಞನೆಂದು ವಿದ್ವತ್ಸಭೆಯಲ್ಲಿ ನಿರ್ಣಿತರಾಗುವ ವ್ಯಕ್ತಿಗೆ ತಾನು ಸಹಸ್ರ ಗೋವುಗಳನ್ನು, ಸುವರ್ಣ ಆಭರಣಗಳೊಂದಿಗೆ ದಕ್ಷಿಣೆಯಾಗಿ ಕೊಡುವುದಾಗಿ ತಿಳಿಸಿ ವಿದ್ವತ್ಸಭೆಯನ್ನು ಸೇರಿಸುತ್ತಾನೆ.

ವಿದ್ವಾಂಸರು ನೆರೆದ ಆ ಸಭೆಯಲ್ಲಿ ಜನಕ ಮಹಾರಾಜನು "ಎಲೆ! ಶ್ರೇಷ್ಠ ವಿದ್ವಾಂಸರೇ! ನಿಮ್ಮಲ್ಲಿ ಯಾರು ಬ್ರಹ್ಮಜ್ಞಾನಿಗಳೋ ಅವರು ಈ ಗೋವುಗಳನ್ನು ಕೊಂಡೊಯ್ಯಬಹುದು" ಎಂದು ಸಾರಿ ಹೇಳಿದನು. ಯಾರಿಗೂ ಧೈರ್ಯ ಬರಲಿಲ್ಲ. ಆಗ ಯಾಜ್ಞವಲ್ಕ್ಯರು "ಸೋಮಶ್ರವ ಈ ಗೋವುಗಳನ್ನು ಸಾಗಿಸು" ಎಂದು ತಮ್ಮ ಶಿಷ್ಯನಿಗೆ ಆದೇಶವನಿತ್ತರು. "ಏನು ನೀವು ಉತ್ಕೃಷ್ಟ ಬ್ರಹ್ಮನಿಷ್ಠರೇ" ಎಂದು ವಿದ್ವಾಂಸರೆಲ್ಲ ಗುಡುಗ ಹತ್ತಿದರು.

"ನನಗೆ ಗೋವುಗಳ ಅವಶ್ಯಕತೆಯಿತ್ತು. ಆದುದರಿಂದ ಅವುಗಳನ್ನು ಪರಿಗ್ರಹಿಸಿದ್ದೇನೆ. ಬ್ರಹ್ಮನಿಷ್ಠರು ಯಾರಾದರೂ ಈ ಸಭೆಯಲ್ಲಿದ್ದರೆ ಅವರಿಗೆ ನನ್ನ ಪ್ರಣಾಮ" ಎಂದು ಕುಳಿತರು ಯಾಜ್ಞವಲ್ಕ್ಯರು.

ವಾದ ವಿವಾದವು ಆರಂಭವಾಯಿತು. ಬ್ರಹ್ಮನಿಷ್ಠಾಭಿಮಾನಿಗಳಾದ ಅಶ್ವಲ, ಋತಭ, ಆರ್ಥಭಾಗ, ಭುಜ್ಯು, ಉಷಸ್ತ, ಕಹೋಲ, ಉದ್ದಾಲಕ ಮೊದಲಾದವರು ಹಲವಾರು ಪ್ರಶ್ನೆಗಳನ್ನು ಕೇಳಿದರು, ಭಗವಾನ್ ಯಾಜ್ಞವಲ್ಕ್ಯರು ಎಲ್ಲರಿಗೂ ಸೂಕ್ತವಾದ ಉತ್ತರವನ್ನಿತ್ತರು.

ಕೊನೆಯಲ್ಲಿ ಬ್ರಹ್ಮವಾದಿನಿಯಾದ ವಾಚಕ್ನವೀಗಾರ್ಗಿಯು ಎದ್ದು ನಿಂತಳು. "ಪೂಜ್ಯವಿಪ್ರರೇ ನಾನು ಪ್ರಕೃತ ಇವರೊಂದಿಗೆ ಎರಡು ಪ್ರಶ್ನೆ ಮಾಡುತ್ತೇನೆ. ಆ ಪ್ರಶ್ನೆಗಳಿಗೆ ಇವರಿಂದ ಉಚಿತವಾದ ಉತ್ತರ ಬಂದಲ್ಲಿ ಇವರನ್ನು ಯಾರೂ ಗೆಲ್ಲಲು ಸಾಧ್ಯವಿಲ್ಲವೆಂಬುದು ಧೃಢವಾಗುತ್ತದೆ" ಎಂದು ಹೇಳಿದಳು.

'ಗಾರ್ಗಿ ಕೇಳತಕ್ಕದ್ದು ಕೇಳ ತಕ್ಕದ್ದು' ಎಂದು ಎಲ್ಲರೂ ಒಕ್ಕೊರಲಿನಿಂದ ಕೂಗಿ ಕೊಂಡರು. ಆಗ ಗಾರ್ಗಿ ಯಾಜ್ಞವಲ್ಕ್ಯರನ್ನು ಕುರಿತು ಪ್ರಶ್ನಿಸಿದಳು "ಭಗವಾನ್! ಬ್ರಹ್ಮಾಂಡಕ್ಕೆ ಮೇಲೆ ಬ್ರಹ್ಮಾಂಡಕ್ಕೆ ತಳಭಾಗದಲ್ಲಿ ಸ್ವರ್ಗಕ್ಕೂ ಭೂಮಿಗೂ ನಡುವೆ ಇದ್ದು, ಭೂತ, ಭವಿಷ್ಯತ್ ವರ್ತಮಾನ ರೂಪವಾದ ಸೂತ್ರಾತ್ಮವಾದ ವಿಶ್ವ ಯಾವುದರಿಂದ ಓತಪ್ರೋತವಾಗಿದೆ?

ಗಾರ್ಗಿ! ಈ ಜಗದ್ರೂಪ ವ್ಯಾಪ್ತ ಸೂತ್ರವು ಅಂತರ್ಯಾಮಿ ರೂಪದ ಆಕಾಶದಲ್ಲಿ ಓತಪ್ರೋತವಾಗಿದೆ.

ಜಗದ್ರೂಪ ಸೂತ್ರಾತ್ಮವು ಯಾವ ಆಕಾಶದಲ್ಲಿ ಓತಪ್ರೋತವಾಗಿದೆಯೋ ಆ ಆಕಾಶ ಎಲ್ಲಿ ಓತ ಪ್ರೋತವಾಗಿದೆ?

ಯಾಜ್ಞವಲ್ಕ್ಯರು ಈ ಪ್ರಶ್ನೆಗೆ ಉತ್ತರಿಸುತ್ತಾ ಹೀಗೆ ಹೇಳಿದರು "ಆ ಅವ್ಯಾಕೃತವಾದ ಆಕಾಶ ಅವಿನಾಶಿಯಾದ ಅಕ್ಷರ ಬ್ರಹ್ಮನಲ್ಲಿಯೇ ಓತಪ್ರೋತವಾಗಿದೆ. ಈ ಅಕ್ಷರಬ್ರಹ್ಮ ದೇಶ–ಕಾಲ–ವಸ್ತು ಇತ್ಯಾದಿ ಪರಿಭೇದಗಳಿಂದ ರಹಿತವಾಗಿ ಸ್ವರ ವ್ಯಾಪಿಯಾಗಿ ಅಪರಿಚ್ಛಿನ್ನವಾಗಿದೆ. ಇದರ ಅಜ್ಞೆಯಿಂದಲೇ ಸೂರ್ಯ ಚಂದ್ರರು ನಿಯಮಿತ ರೂಪದಿಂದ ವ್ಯವಹರಿಸುತ್ತಾರೆ. ಇದನ್ನರಿತು ಜೀವನಯಾತ್ರೆಯನ್ನು ಪೂರ್ಣಗೊಳಿಸುವವನೇ ಬ್ರಹ್ಮವಿದ."

ಮಹರ್ಷಿಗಳಾದ ಭಗವಾನ್ ಯಾಜ್ಞವಲ್ಕ್ಯರ ಈ ಉತ್ತರದಿಂದ ಸಂತುಷ್ಟಳಾದ ವಾಚಕ್ನವೀ ಗಾರ್ಗಿಯು "ಭಗವಾನ್ ಯಾಜ್ಞವಲ್ಕ್ಯರು ವಂದ್ಯರು. ಯಾರೂ ಅವರನ್ನು ವಾದದಲ್ಲಿ ಸೋಲಿಸಲಾರರು" ಎಂದು ಅಂತಿಮ ನಿರ್ಣಯ ನೀಡಿದಳು. ★

ಎಚ್. ಆರ್. ಗೋಪಾಲಕೃಷ್ಣ

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ದಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಸಂಪರ್ಕಿಸಿ

**ಆಡಳಿತ ನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

# ಪುರಂದರರ ಪದಗಳಲ್ಲಿ ಸ್ತ್ರೀ

ದಾಸರ ಸಾಹಿತ್ಯದಲ್ಲಿ ಪುರಂದರದಾಸರಿಗೆ ಅಗ್ರಸ್ಥಾನವಿದೆ. ಆ ಮಹಾನುಭಾವರ ಕೀರ್ತನೆಗಳಲ್ಲಿ ಚರಾಚರ ಪ್ರಪಂಚವು ಗೋಚರವಾಗುತ್ತದೆ. ಅವರ ಪದಗಳಲ್ಲಿ ವನಿತೆಯರನ್ನು ಕುರಿತ ಕೀರ್ತನೆಗಳು ಮುಖ್ಯವಾದವು. ಅವುಗಳನ್ನು ಉಪದೇಶಾತ್ಮಕಪದಗಳು,ಅಭಿಶಂಸಾತ್ಮಕ ಪದಗಳು, ಸ್ವಭಾವಾತ್ಮಕಗಳೆಂದು ವಿಭಾಗ ಮಾಡಬಹುದು.

ಕವಿಯಾದವನು ಸಾಮಾನ್ಯ ಮಾನವರಗಿಂತಾ ಭಿನ್ನವಾದವನು. ಅವನಿಗೆ ದೂರದೃಷ್ಟಿ ಉಂಟು. ಭವಿಷ್ಯತ್ತನ್ನು ಹೇಳುವ ಶಕ್ತಿ ಅವನಿಗೆ ಇದೆ. ಶಾಸ್ತ್ರಾರ್ಥ ಪ್ರಸಂಗಗಳನ್ನು ಕುರಿತು ಜನರಿಗೆ ಯಾವುದು ಒಳ್ಳೆಯದೋ ಅದನ್ನು ಬೋಧಿಸುವ ಅಧಿಕಾರ ಕವಿಗೆ ಇದೆ. ಅದೇಪ್ರಕಾರವಾಗಿ ಪುರಂದರದಾಸರು ನೀತಿಗಳನ್ನು ಬೋಧಿಸುವವರು.

ಆಶ್ರಮಗಳು ನಾಲ್ಕುಬಗೆ — ಬ್ರಹ್ಮಚರ್ಯ್ಯ ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಆಶ್ರಮಗಳು. ಇವುಗಳಲ್ಲಿ ಗಾರ್ಹಸ್ಥ್ಯ ಶ್ರೇಷ್ಠವಾದದ್ದು. ಮುಕ್ತಿ ಬಯಸುವರಿಗೆ ಗೃಹಸ್ಥಧರ್ಮ ಪ್ರತಿಬಂಧಕವಿಲ್ಲ. ಈ ಅಭಿಪ್ರಾಯವನ್ನು ದಾಸರು ಸ್ಪಷ್ಟವಾಗಿ ಹೇಳಿದ್ದಾರೆ. ಶ್ರೀಪಾದರಾಯರು, ವ್ಯಾಸರಾಯರು ಬ್ರಹ್ಮಚರ್ಯದಲ್ಲಿ ವಿದ್ಯೆ ಕಲಿತು ಸನ್ಯಾಸ ಸ್ವೀಕಾರ ಮಾಡಿದವರು, ಆದರೆ ಪುರಂದರದಾಸರು ದಾಸ ದೀಕ್ಷೆ ಸ್ವೀಕಾರಮಾಡಿದರೂ ಗೃಹಸ್ಥರಾಗಿ ಮತ ಪ್ರಚಾರ ಮಾಡಿದವರು. ಆದ್ದರಿಂದ ಮುಕ್ತಿ ಬಯಸುವವರಿಗೆ ಸಂನ್ಯಾಸ ಬೇಡ. ಸಂಸಾರ ಪ್ರತಿಬಂಧಕವಿಲ್ಲವೆಂದು ಅವರ ಅಭಿಪ್ರಾಯ. ದಾಸರ ವಾಕ್ಯಗಳನ್ನು ನೋಡಿ—

'ಸತಿ ಸುತರಿರಬೇಕು
ಅತಿ ಮೋಹ ಬಿಡಬೇಕು'
"ಸತಿಸುತ ಬಿಟ್ಟು ಯತಿಗಳಾಶ್ರಮವೇಕೆ"
'ಕುಲಸತಿಯಾದರೆ ಕೂಡಿರಬೇಕು
ಸುಲಭದಿಂದಲಿ ಸ್ವರ್ಗ ಸೂರಾಡಬೇಕು'
'ಮಂದಗಮನೆ ಕೂಡ
ಸರಸವಾಡುತ ಲೊಮ್ಮೆ
ಕೃಷ್ಣಾ ಎನಬಾರದೆ'

ಸಂಸಾರ ರಥಕ್ಕೆ ಸತೀಪತಿಗಳು ಚಕ್ರಗಳು. ಆದ್ದರಿಂದ ಗುಣಕ್ಕೆ ಪ್ರಾಧಾನ್ಯಕೊಟ್ಟ ದಾಸರು ಹೆಣ್ಣಿಗೂ, ಗಂಡಿಗೂ ಉಪದೇಶಮಾಡುತ್ತಾರೆ. ಮದುವೆ ಮಾಡಿ ತಮ್ಮ ಮಗಳನ್ನು ಗಂಡನ ಮನೆಗೆ ಕಳಸುವಾಗ ತಾಯಿತಂದೆಯರು ಉಪದೇಶ ಮಾಡುವ ಪದ್ಧತಿಯಲ್ಲಿ ಒಂದು ಕೀರ್ತನೆಯನ್ನು ದಾಸರು ಹಾಡಿದ್ದಾರೆ.

"ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ—
ಮಗಳೆ ಮನ
ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ
ಅತ್ತೆ ಮಾವ ಗಂಜಿಕೊಂಡು ನಡೆಯಬೇಕಮ್ಮ
ಮಗಳೆ
ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ
ಹೊತ್ತುಹೊತ್ತಿಗೆ ಮನೆಯ ಕೆಲಸ ಮಾಡ
ಬೇಕಮ್ಮ—ಮಗಳೆ
ಹತ್ತುಮಂದಿ ಒಪ್ಪುವ ಹಾಗೆ
ನುಡಿಯಬೇಕಮ್ಮ
ಕೊಟ್ಟುಕೊಂಬುವ ನೆಂಟರೊಡನೆ ದ್ವೇಷ
ಬೇಡಮ್ಮ—ಮಗಳೆ
ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ
ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ—
ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ

---

**ಡಾ॥ ಕೆ. ಸರ್ವೋತ್ತಮನ್.**

---

ನೆರೆ ಹೊರೆಯವರಿಗೆ ನ್ಯಾಯವನ್ನು ಹೇಳ
ಬೇಡಮ್ಮ—ಮಗಳೆ
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ
ಪರರನಿಂದಿಪ ಹೆಂಗಳೊಡನೆ ಸೇರಬೇಡಮ್ಮ—
ಮಗಳೆ
ಗುರುಪುರಂದರವಿಠಲನ ಸ್ಮರಣೆ ಮರೆಯ
ಬೇಡಮ್ಮ"

ಮತ್ತು

'ಹೆಣ್ಣಿನಂತೆ ಲಕ್ಷಣ ಇರಬೇಕು ಬಾಳೆ
ಹಣ್ಣಿನ ರುಚಿಯಂತೆ ಗುಣವಿರಬೇಕು'

ಎನ್ನುವ ಕೀರ್ತನೆಯಲ್ಲಿ— ಹೆಣ್ಣು ನಡತೆಯಲ್ಲಿ ಪಾರ್ವತಿಯಾಗಿ, ದಯದಲ್ಲಿ ಲಕ್ಷ್ಮೀದೇವಿಯಾಗಿ, ಪತಿಸೇವೆ ಮಾಡುವುದಲ್ಲಿ ಅರುಂಧತಿಯಾಗಿ ಇರಬೇಕು ಎಂದು ಸ್ಪಷ್ಟಪಡಿಸಿದ್ದಾರೆ.

ಸಾಂಸಾರಿಕ ಜೀವನಕ್ಕೆ ಪ್ರಾಧಾನ್ಯಕೊಟ್ಟ ದಾಸರವರು ಪುರುಷನಿಗೂ, ವನಿತೆಯರಿಗೂ ಪ್ರತ್ಯೇಕವಾಗಿ ಉಪದೇಶಮಾಡಿದ್ದಾರೆ. 'ಮಿಂದು ಮಲವನು ಬಿಡಿಸಿ ಮೇಲು ವಸ್ತ್ರವನು ತೊಡಿಸಿ, ಅಂದವಾದ ಆಭರಣವಿಟ್ಟು, ಆರ್ತಿಯಿಂದ ನೋಡುತ, ಗಂಧ ಕಸ್ತೂರಿ ಪುನುಗು ಪೂಸಿ ಘಮಕದಿಂದ ಹೂವ ಮುಡಿಸಿ, ತನ್ನ ಪತಿಯರೊಲುಮೆ ಗೊಲಿದು ತಾನು ಸುಖಿಸಬಾರದೆ' ಎಂದು ಸಲಹೆ ನೀಡುತ್ತಾರೆ. 'ಸತಿಪತಿಯು ಏಕವಾಗಿ ಸರ್ವ ಜನರ ಹಿತವಂಚಿಸಿ, ಅತಿಥಿಯನ್ನು ಪೂಜೆಮಾಡಿ ಒಂದೆನ್ನಿಸಿಕೊಳ್ಳುತ ವಿಠಲನ ಪಾದವನು ಸ್ಮರಿಸಿ ಸುಖದಿಂದ ಆಳಿರೋ' ಎಂದು ಆಶೀರ್ವಾದ ಮಾಡುತ್ತಾರೆ.

"ಅಭಿಶಂಸನೆ"ಯೆಂದರೆ ನಿಂದಿಸುವುದು ಎಂದು ಅರ್ಥ. ದಾಸರು ಎಷ್ಟು ಸಾತ್ತ್ವಿಕರಾಗಿ ಕಾಣುಸುತ್ತಾರೋ ಕೆಲವು ಸಮಯಗಳಲ್ಲಿ ಪರುಷ ಭಾಷಣಗಳು ಆಡುತ್ತಾರೆ. ಪುರುಷರಿಗೆ ವೈರಾಗ್ಯ ಭಾವ ಉಂಟುಮಾಡುವುದಕ್ಕಾಗಿ ಇಂತಹ ಮಾರ್ಗವನ್ನು ದಾಸರು ಅನುಸರಿಸಬಹುದು.

ಅತ್ತಮಾವಗೆ ಅಂಜದವಳ ತನ್ನ
ಉತ್ತಮ ಪುರುಷನ ಜರೆದು ನುಡಿವಳ
ಭಕ್ತರ ಕಂಡು ಉರಿವವಳ ನಡು
ಗೆತ್ತಿಯ ಚರ್ಮದ ಕೆತ್ತಬೇಕವಳ

ಸ್ವೇಚ್ಛಾಸಂಚಾರಿಣಿಯಾದ ಮಡದಿಯರನ್ನು ಹುಟ್ಟು ಹುಟ್ಟಲಿ ಬಾಯೊಳು ಹೆಟ್ಟಬೇಕೆಂದು, ನಲ್ಲರ ಕಂಡು ನಗುವಳನ್ನು ಹಲ್ಲು ಮುರಿದು ಜಿಹ್ವೆ ಸೀಳ ಬೇಕೆಂದು ಶಿಕ್ಷೆ ಕೊಡುತ್ತಾರೆ. ಕಡೆಗೆ ಪರಸ್ತ್ರೀಯರ ನೋಡಿದರೆ ಸ್ತ್ರೀ ಹತ್ಯವು, ಮಾತಾಡಿದರೆ ಗೋ ಹತ್ಯವು, ಕಾಡಿದರೆ ಶಿಶು ಹತ್ಯವು, ಮೈಗೂಡಿದರೆ ಬ್ರಹ್ಮಹತ್ಯ ಬರುತ್ತದೆಂದು ಪಾಪ ಭೀತಿ ಉಂಟುಮಾಡುತ್ತಾರೆ. 'ಧರಣಿ ಜನರು ಕೇಳಿ ಲೇಶ ಕರುಣವಿಲ್ಲ ನಾರಿಯರಿಗೆ—ನಂಬಬೇಡಿ ನಾರಿಯರನು' ಎಂದು ಕಪಟವರ್ತನೆ ನಡಿಸುವ ಸ್ತ್ರೀಜನರನ್ನು ದ್ವೇಷಿಸುತ್ತಾರೆ. ವನಿತೆಯರನ್ನು ನಿಂದಿಸಿದ ಕೆಲವು ಪಾದಗಳನ್ನು ನೋಡಿ—

'ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ
ಹಡೆದವಳ ಎದೆ ಕೊರಳ ಕೊಯ್ವಂಥ ಚೋರಿ'
"ತನ್ನ ಮನಕೆ ಬಾರದ ಹೆಣ್ಣು ಮೆಚ್ಚಿ
ಬಂದರೇನು
ವಾದಿಸುತ ಸತಿ ಸುತರು ಇದ್ದು ಫಲವೇನು

ತನಗಿಲ್ಲದಾ ವಸ್ತುವೆಲ್ಲಿದ್ದರೇನು"
'ಅತಿಪ್ರೀತಿಯಿಂದಲಿ ಮದುವಾವ ಮೋಹದ
ಸತಿ ನಿನ್ನ ಮರಣಕಾಲದಲ್ಲಿ
ಗತಿ ಯಾರು ತನಗೆಂದು ಗೋಳಿಡುವಲಲ್ಲದೆ
ಜಾತಿಯಾಗಿ ನಿನ್ನ ಸಂಗಡ ಬಾಹೋದಲ್ಲ'

ಸ್ತ್ರೀಯೆಂದರೆ ದಾಸರಿಗೆ ಅನುಕಂಪವಿದೆ. ಹೆಂಗಸರನ್ನು ಹಿಂಸಿಸುವ ಪುರುಷರನ್ನು ದಾಸರು ತೀಕ್ಷ್ಣವಾಗಿ ವಿಮರ್ಶನೆ ಮಾಡಿದ್ದಾರೆ. ಕೆಲವು ವಾಕ್ಯಗಳನ್ನು ನೋಡಿ

"ಪಟ್ಟ ಸ್ತ್ರೀಯೊಳ ಬಿಟ್ಟವ ಪಾಯಿ"
"ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ"
"ಸೂಳೆಯನು ಕಾಯಿಸುವ ಶುದ್ಧ ಹೊಲೆಯ"
"ಪರ ಸತಿಯ ಬಯಸದಿದ್ದರೆ ಒಂದು ಸ್ನಾನ"

ದಾಸರು ಜನರ ನಡತೆಯನು ಸುನಿಶಿತವಾಗಿ ಪರಿಶೀಲನೆ ಮಾಡಿದವರು. ಸಾಮಾಜಿಕ ಚಿತ್ರಣೆ ಅವರ ಪದಗಳಿಗೆ ಪ್ರಾಣ. 'ಸತಿಯಿದ್ದರು ಚಿಂತೆ ಸತಿಯಿಲ್ಲದ ಚಿಂತೆ, ಮತಿಹೀನ ಸತಿಯಾದರು ಚಿಂತೆಯು, ಪೃಥ್ವಿಯೊಳಗೆ ಸತಿ ಕಡು ಚೆಲ್ವೆ ಯಾದರೆ ಮಿತಿಮಾರೆಯಿಲ್ಲದ ಮೋಹದ ಚಿಂತೆ' ಎಂದು ಚಿಂತಾ ವೈವಿಧ್ಯಗಳನ್ನು ವರ್ಣಿಸಿದ್ದಾರೆ. "ಪತಿಯನ್ನು ನಿಂದಿಸಿ ಪೊಗಳುವ ಸತಿಯಳು ವ್ರತ ಗಳು ಮಾಡಿದರೇನುಫಲ"ಎಂದು ಪ್ರಶ್ನಿಸುತ್ತಾರೆ. "ಪೊರೆದ ತಾಯ್ತಂದೆಗಳ ಮಾತುಗಳ ಮನ್ನಿಸದೆ ತರುಣಿಯರ ನುಡಿಗೇಳಲಿಚ್ಛಿಸುತ್ತಿಹ"ರನ್ನು ವಿಮರ್ಶನೆ ಮಾಡುತ್ತಾರೆ.

"ತಂದೆತಾಯಿ ತಿರದು ತಿನಲು ಒಂದುದಿನ ಕೇಳಲಿಲ್ಲ
ಮಂದಗವುನೆರೊಡನೆ ಆನಂದದಿಂದಲಿರುವರು
ತಂದೆ ಸತ್ತೆ ಮೇಲೆ ನೂರುಮಂದಿ ವಿಪ್ರರ ಗುಣಿಸಿ ತಮ್ಮ
ತಂದೆ ತೃಪ್ತನಾದನೆಂಬರು ಮಂಸಮತಿಯ ಜನಗಳು"

ಎಂದು ಪರಿಹಾಸ ಮಾಡುತ್ತಾರೆ.

"ಕೀಳು ಕೋಟಿಯೊಳೊಬ್ಬ ಅಗಸಾಲ ಸತ್ತರೆ
ಮೇಲು ಕೋಟಿಯೊಳೊಬ್ಬ ಅಗಸತಿ ಅಳುವಳು
ಅವನಿಗೂ ಅವಳಿಗೂ ಸಂಬಂಧವೇನೆಂದು
ಅದನೋಡಿ ನಗುತಿದ್ದ ಪುರಂದರವಿಠಲ"

ನೆಂದು ತಾನು ಹಸನ್ಮುಖರಾಗಿ ನಿಲ್ಲುತ್ತಾರೆ.

ಪತಿವ್ರತೆಗಳೆಂದರೆ ದಾಸರಿಗೆ ಪೂಜ್ಯಭಾವ ಹೆಚ್ಚು. ಸ್ಥಿರವಾದ ಪತಿವ್ರತೆಯ ಪರಮನಿಂದಿಪ ಕಾಲ ಎಂದು ಕಾಲಪ್ರಭಾವವನ್ನು ತಿಳಿಸಿ ದುಃಖಿಸುತ್ತಾರೆ. "ಸತಿಯ ಸಂಗಡಿ ಸೌಖ್ಯವಿದ್ದರೆ ಸಲಿಗೆ ಕೊಟ್ಟ ಕೋತ್ಯೆಂಬರು ವ್ರತದ ನಾರೀರ ಸಂಗವ ಬಿಟ್ಟರೆ ನಪುಂಸಕನೆಂತೆಂಬರು" ಎಂದು ಸಾಮಾನ್ಯ ಜನರ ಸ್ವೇಚ್ಛಾಸಂಭಾಷಣವನ್ನು ಪ್ರಸ್ತಾಪಿಸಿದ್ದಾರೆ.

ದಾಸರು 'ಉಂಛವೃತ್ತಿ' ಮಾಡುತ್ತಾ ಸಂಸಾರಿ ಗಳ ಕಷ್ಟಸುಖಗಳನ್ನು ನೋಡಿ ಅವರಿಗೆ ಉಪದೇಶ ಗಳು ಕೊಟ್ಟಿದ್ದಾರೆ. ಪತಿವ್ರತೆಯರನ್ನು ಪೊಗಳುವ ದಾಸರವರು ತಮ್ಮ ಪದಗಳಲ್ಲಿ ಗೈಯಾಳಿಗಳನ್ನು ನಿಂದಿಸಿದ್ದಾರೆ. 'ಹೆಂಡತಿ ಪ್ರಾಣ ಹಿಂಡುತಿ' 'ಕದವ ಮುಚ್ಚಿದಳಿದಕೊ ಗೈಯಾಳಿ ಮೂಳಿ' ಪದಗಳೇ ಅದಕ್ಕೆ ಪ್ರಮಾಣ. ಇಂತಹ ಮಡದಿಯ ರನ್ನು ನೋಡಿ 'ಸತಿಗೆ ಸ್ವತಂತ್ರವ ಕೊಡದಿರು' ಎಂದು ಹೆಚ್ಚರಿಕೆ ಮಾಡುತ್ತಾರೆ.

ದಾಸರು ವಿಠಲನ ಭಕ್ತರು. ವಿಠಲನು ಸಾಕ್ಷಾತ್ ವಿಷ್ಣುವೇ. ಆದ್ದರಿಂದ ದಶಾವತಾರ ವರ್ಣನೆ ಗಳನ್ನು ವಿಠಲನ ಪರವಾಗಿ ದಾಸರು ಹಾಡು ತ್ತಾರೆ. ಅವತಾರಗಳ ವರ್ಣನೆಗಳಲ್ಲಿ ಕೂಡ ಸ್ತ್ರೀ ಸ್ವಭಾವ ಚಿತ್ರಣೆ ಕಾಣುತ್ತದೆ.

ಗರ್ಭವತಿಯಾಗುವ ಧರ್ಮ ಮಹಿಳರಿಗೆ ಮಾತ್ರವೇ. ಆದರೆ ವಿಷ್ಣು ಬ್ರಹ್ಮನ ಪಡೆದನೆಂದು ಸ್ತ್ರೀಧರ್ಮವನ್ನು ಸೊಗಸಾಗಿ ಹೇಳುತ್ತಾರೆ. ಪಂಕ್ತಿಯೊಳಗೆ ಪರವಂಚನೆ ಮಾಡಿ ಸುರರಿಗೆ ಅಮೃತವನುಣಿಸಿದನೆಂದು ಹಾಡಿದರು.

'ಹೆಂಡಿರ ನಾಳುವಳೀ ಕನ್ನಿಕೆ
ಗಂಡನಿಲ್ಲದ ಹೆಂಗಸೀ ಕನ್ನಿಕೆ'

ಎಂದು ಅವತಾರಗಳನ್ನು ಭಗವಂತನ ದಿವ್ಯಲೀಲಾ ವಿಭವಗಳನ್ನು ರಮ್ಯವಾಗಿ ಚಿತ್ರೀಕರಿಸಿದ್ದಾರೆ.

ದಾಸರ ವಾಣಿಯಲ್ಲಿ ಆದರ್ಶ ಉಂಟು, ಉದ್ವೇಗ ಉಂಟು, ಪಾರುಷ್ಯ ಉಂಟು.

ಏನೇ ಆದರೂ ನವಕೋಟಿ ನಾರಾಯಣ ಬಿರುದು ಹೊಂದಿ ಸಕಲೈಶ್ವರ್ಯ ಸಂಪದದಿಂದ ಯವ್ವನದ ಮೊದಲ ಕಾಲವನ್ನು ಕಳೆದ ಪುರಂದರ ದಾಸರಿಗೆ ಸ್ತ್ರೀಯರ ಬಗ್ಗೆ ಪೂಜ್ಯಭಾವನೆ ಹೆಚ್ಚು. ತಮ್ಮನ್ನು ಹರಿಮಾರ್ಗದಲ್ಲಿ ತಂದ ಹಿರಿಯಳು ಹೆಂಗಸೇ ಎಂದು ಅವರು ಬಲ್ಲರು. ವ್ಯಾಸರಾಯ ರಿಂದ ಅಂಕಿತ ಪಡೆಯುವುದಕ್ಕೂ ಮುನ್ನ ತಮ್ಮನ್ನು ಹರಿಯುತ್ತ ತಿರುಗಿಸಿದ ಹೆಂಡತಿಯ ಬಗ್ಗೆ ಹೇಳುತ್ತ

"ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಚಿತ್ತ ಹಿಡಿಸಿದಳಯ್ಯ"

ಎನ್ನುತ್ತ ತುಂಬು ಹೃದಯದಿಂದ ಸ್ತ್ರೀಯರ ಹಿರಿಮೆಯನ್ನು ಹೊಗಳುತ್ತಾರೆ. ಹೀಗೆ ಪುರಂದರ ದಾಸರಲ್ಲಿ ಮೂಲಭೂತವಾದ ಸಹಾನುಭೂತಿ ಪರವಾದ ಗೌರವ ವಿರುವುದನ್ನೇ ಅವರ ಕೀರ್ತನೆ ಗಳಲ್ಲಿ ಗುರುತಿಸಬಹುದು.

---

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ

# ಪರಕಾಮಣಿ

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಹುಂಡಿಯಲ್ಲಿನ ದೈನಂದಿನ ಕಾಣಿಕೆ ಗಳನ್ನು ವಿಂಗಡಿಸಿ, ಅವುಗಳ ಲೆಕ್ಕಮಾಡುವುದನ್ನು ಪರಕಾಮಣಿ ಎನ್ನುತ್ತಾರೆ.

## ಇಲ್ಲಿ ಯಾತ್ರಿಕ ಸಾಕ್ಷಿಯ ಪಾತ್ರವೇನು?

ಯಾತ್ರಿಕ ಸಾಕ್ಷಿಯ ಕೆಲಸವು ಪರಕಾಮಣಿಯಲ್ಲಿ ಕುಳಿತು ಅಲ್ಲಿನ ಕಾರ್ಯ ಕ್ರಮಗಳನ್ನು ಎಚ್ಚರಿಕೆಯಿಂದ ಗಮನಿಸುವುದಾಗಿದೆ. ಪರಕಾಮಣಿಯಲ್ಲಿ ತೊಡಗಿರುವ ಕೆಲಸಗಾರರನ್ನು ಅವರು ತಮ್ಮ ಕೆಲಸ ನಿರ್ವಹಿಸುತ್ತಿರುವಾಗ ನೋಡಿಕೊಳ್ಳುವುದಾ ಗಿದೆ. ಯಾವೊಬ್ಬ ಕೆಲಸಗಾರನಾದರೂ ಪರಕಾಮಣಿಯಲ್ಲಿ ಚೌರ್ಯ ಅಥವಾ ತಪ್ಪುಗೆಲಸವನ್ನು ಮಾಡುತ್ತಿದ್ದಲ್ಲಿ ಯಾತ್ರಿಕ ಸಾಕ್ಷಿಯು ಕೂಡಲೇ ಅಲ್ಲಿಯೇ ಇರುವಂ ತಹ ಅಧಿಕಾರಿಗೆ ಸೂಕ್ತ ಕ್ರಮವನ್ನು ಕೈಗೊಳ್ಳಲು ತಿಳಿಸಬೇಕು.

ಯಾತ್ರಿಕ ಸಾಕ್ಷಿಯು ಪರಕಾಮಣಿ ಪೂರ್ತಿಯಾಗುವವರೆಗೂ ಅಲ್ಲಿಯೇ ಇದ್ದು, ದೇವರ ದರ್ಶನವನ್ನು ಪಡೆದು ಪ್ರಸಾದವನ್ನು ಪಡೆಯ ಬೇಕು.

1—12—81 ರಿಂದ

31—12—81 ವರೆಗೆ

# ನಿಮ್ಮ ಭವಿಷ್ಯ

ಡಾ॥ ಅರ್ಕಸೋಮಯಾಜಿ.

## ಮೇಷ :

ಧನಲಾಭ ಹಾಗೂ ಯಶಸ್ಸು. ಶೃಂಗಾರಭಾವ ಸೂಚಿತವಾಗಿವೆ. ಆದರೆ ವಿವಾದಗಳು, ತುಸು ಅನಾರೋಗ್ಯ ಮೊದಲಪಕ್ಷದಲ್ಲಿ ಹೆಂಡತಿಯ ಅತೃಪ್ತಿ. ಆದರೆ ಈ ಮೊದಲ ಪಕ್ಷವೇ ಎರಡನೆಯ ಹದಿನೈದು ದಿನಕ್ಕಿಂತ ಉತ್ತಮ.

ಅಶ್ವಿನಿಯವರಿಗೆ 2, 4, 8, 19, 21, 29, 31,

ಭರಣಿಯವರಿಗೆ 1, 3, 8, 12ರ ಬೆಳಗ್ಗೆ 20, 28, 30

ಕೃತ್ತಿಕೆ ಮೊದಲಪಾದದವರಿಗೆ 2, 4, 8, 19, 21, 29, 31, ಒಳಿತಿನ ದಿನಗಳು.

## ವೃಷಭ :

ಧಾರ್ಮಿಕ ಪ್ರವರ್ತನೆ. ಮಕ್ಕಳ ಮೂಲಕ ತುಸು ಚಿಂತೆ. ಧನಲಾಭವಿದ್ದರೂ ಮನಶ್ಶಾಂತಿಯಿರದು. ಆಗಾಗ ಪ್ರಯಾಣ ಅಥವಾ ಹೊಟ್ಟೆನೋವು ಸೂಚಿತ. ವಿವಾದಗಳು 13 ರನಂತರ ಪರಿಹಾರವಾಗುತ್ತವೆ. 15 ರ ನಂತರ ತುಸು ಅನಾರೋಗ್ಯ, ಹೆಂಡತಿಯ ಅತೃಪ್ತಿ.

ಕೃತ್ತಿಕೆ 2, 3, 4, ಪಾದಗಳವರಿಗೆ 4, 6, 10ರ ಮಧ್ಯಾಹ್ನ, 11 ರ ಬೆಳಗ್ಗೆ, 14, 21, 24, 31,

ರೋಹಿಣಿಯವರಿಗೆ 3, 7, 22 ರ ಮಧ್ಯಾಹ್ನ 23 ರ ಬೆಳಗ್ಗೆ,

ಮೃಗಶಿರ 1, 2, ಪಾದಗಳವರಿಗೆ 4, 6, 14, 21, 23, ರ ಮಧ್ಯಾಹ್ನ 24 ರ ಬೆಳಗ್ಗೆ, 31, ಒಳಿತಿನ ದಿನಗಳು.

## ಮಿಥುನ :

ಧನಲಾಭವಿದ್ದರೂ ಅನಗತ್ಯವೆಚ್ಚ ಮೊದಲ ಪಕ್ಷದಲೂ ಆಪ್ತರಿಂದ ಬೇರ್ಪಡೆ, ಸ್ನೇಹಿತರಿಂದ ದೂರಾಗುವಿಕೆ, ಹೊಟ್ಟೆನೋವು, ದುಷ್ಟ ಸಹವಾಸ, ಯಶಸ್ಸು. ಎರಡನೆಯ ಪಕ್ಷದಲ್ಲಿ ಪ್ರಯಾಣ ಅಥವಾ ವಿವಾದ.

ಮೃಗಶಿರ 3, 4, ಪಾದಗಳವರಿಗೆ 6, 8, 12, ರ ಮಧ್ಯಾಹ್ನ 18 ರ ಬೆಳಗ್ಗೆ, 24, 26,

ಆದರ್ರಾದವರಿಗೆ 7, 13, 16,

ಪುನರ್ವಸು 1, 2, 3 ಪಾದಗಳವರಿಗೆ 6, 8, 12, 16, 26 ಒಳಿತಿನ ದಿನಗಳು

## ಕರ್ಕಾಟಕ :

ಧನಲಾಭ ಆದರ ಒಂದಂಶ ಪುತ್ರರಿಂದ ಅಥವಾ ಅಪಮಾರ್ಗದಿಂದ ಅರ್ಜಿತ. ಒಳ್ಳೆಯ ಆರೋಗ್ಯ, ಹೊಸಉಡುಪು, ಸೇವಕರು, ವಾಹನ ಲಾಭ. ಬಂಧುಗಳು ಅಥವಾ ಸ್ತ್ರೀಯರು ಅಥವಾ ಕುಜನರು, ತೊಂದರೆ ನೀಡುತ್ತಾರೆ. ಮೊದಲ ಪಕ್ಷದಲ್ಲಿ ಹೆಂಡತಿಯ ಅತೃಪ್ತಿ ಅಥವಾ ತುಸು ಅನಾರೋಗ್ಯ ಎರಡನೆಯ ಪಕ್ಷದಲ್ಲಿ ಧಾರ್ಮಿಕಪ್ರವರ್ತನೆ, ಆಗಾಗಪಯಣ, ಒಳ್ಳೆಯ ಆರೋಗ್ಯ, ಧನಲಾಭ, ಯಶಸ್ಸು.

ಪುನರ್ವಸು 4 ನೇ ಪಾದದವರಿಗೆ 1, 8, 10 ರ ಬೆಳಗ್ಗೆ 11, ರ ಮಧ್ಯಾಹ್ನ, 19 ರ ಮಧ್ಯಾಹ್ನ 20 ನ ಬೆಳಗ್ಗೆ, 26, 28,

ಪುಷ್ಯಮಿಯವರಿಗೆ 2, 10, ರ ಮಧ್ಯಾಹ್ನ 11 ರ ಬೆಳಗ್ಗೆ, 14, 19, 29,

ಆಶ್ಲೇಷದವರಿಗೆ 1, 8, 11, ರ ಬೆಳಗ್ಗೆ 12 ರ ಮಧ್ಯಾಹ್ನ, 14,18ರ ಮಧ್ಯಾಹ್ನ, 26,28,30 ಒಳಿತಿನ ದಿನಗಳು.

## ಸಿಂಹ :

ವಿವಾದ ಹಾಗೂ ಶತ್ರುಗಳು ಗಮನ ಸೆಳೆಯುವರು. ಧನಲಾಭವಿದ್ದರೂ ಹೆಚ್ಚು ವೆಚ್ಚ. ತುಸು ಅನಾರೋಗ್ಯ. ಮನೆಯಲ್ಲಿ ಚೋರಭಯ, ಒಂದಿಲ್ಲೊಂದು ಚಿಂತೆ.

ಮಖಾಧದವರಿಗೆ 2,4, 10, ರ ಮಧ್ಯಾಹ್ನ 11 ರ ಬೆಳಗ್ಗೆ 12 ರ ಮಧ್ಯಾನ್ನ 17, 21, 22 29

ಪು.ಫ.ದವರಿಗೆ 1, 3, 11 ರ ಮಧ್ಯಾಹ್ನ 12 ರ ಬೆಳಗ್ಗೆ, 13, 17, 22, 28, 30,

ಉತ್ತರ ಮೊದಲನಾದವರಿಗೆ 2, 4, 10 ರ ಮಧ್ಯಾಹ್ನ 11 ರ ಬೆಳಗ್ಗೆ 12 ರ ಮಧ್ಯಾಹ್ನ 16,21 ರ ಮಧ್ಯಾಹ್ನ 22,ರ ಬೆಳಗ್ಗೆ, 26,29 ಒಳಿತಿನ ದಿನಗಳು

## ಕನ್ಯಾ :

ಧನಲಾಭ, ಬಂಧು ಆಗಮನ, ಹಿರಿಯರ ಪ್ರಶಂಸೆಗಳಿಂದಾಗಿ ಪ್ರಥಮ ಪಕ್ಷ ಉತ್ತಮತರ. ದ್ವಿತೀಯಪಕ್ಷದಲ್ಲಿ ತುಸು ಅನಾರೋಗ್ಯ, ಆದರೆ ಉತ್ಸಾಹಶೀಲತೇ ಆಗಾಗ ಪ್ರಯಾಣ, ಆಪ್ತರಿಂದ ಬೇರ್ಪಡೆ.

ಉತ್ತರ 2, 3, 4, ಪಾದಗಳವರಿಗೆ 4, 6, 12 ರ ಮಧ್ಯಾಹ್ನ, 14, 19, 24, 31,

ಹಸ್ತದವರಿಗೆ 3, 7, 11 ರ ಮಧ್ಯಾಹ್ನ,

ಚಿತ್ತಾ 1, 2, ಪಾದಗಳವರಿಗೆ 4,6,12, 14, 19, 24, 51 ಒಳಿತಿನ ದಿನಗಳು.

## ತುಲಾ :

ಒಳ್ಳೆಯಸ್ನೇಹ ಲಾಭವಾದರೂ ಮನಶ್ಶಾಂತಿಯಿಲ್ಲದಂತಹವಾದಗಳು.ಪ್ರಥಮಪಾದದಲ್ಲಿ ವಂಚನೆಗೊಳಗಾಗುವಿಕೆ; ಅಥವಾ ಕಣ್ಣು ನೋವು ದ್ವೀತಿಯಪಕ್ಷದಲ್ಲಿ ಧನಲಾಭ, ಯಶಸ್ಸು, ದುಷ್ಪ್ರವರ್ತನೆ ಸೂಚಿತವಾಗಿದೆ.

ಚಿತ್ತಾ 3, 4 ಪಾದಗಳವರಿಗೆ 6, 8, 14, 16, 21, 26

ಸ್ವಾತಿ 7, 16, 22, 27

ವಿಶಾಖಾ 1, 2, 3, ಪಾದಗಳವರಿಗೆ 6, 8, 14, 16, 21, 26 ಒಳಿತಿನ ದಿನಗಳು.

## ವೃಶ್ಚಿಕ :

ಧನಲಾಭ ಹಾಗೂ ಯಶ. ಪ್ರಥಮ ಪಕ್ಷದಲ್ಲಿ ಪ್ರಯಾಣ ಹಾಗೂ ಪ್ರಯಾಸ, ತುಸು ಹೊಟ್ಟೆನೋವು. ದುಷ್ಟ ಸಲಹೆಗಳಿಂದ ದೂರ ವಿರಬೇಕು ದ್ವಿತೀಯ ಪಕ್ಷದಲ್ಲಿ ಕಣ್ಣು ನೋವು ವಂಚಿತರಾಗು

ವಿಕೆ, ಗೌರವಲಾಭ, ಆದರೆ ಅಧಾರ್ಮಿಕ ಪ್ರವರ್ತನೆ.

ವೈಶಾಖ 4ನೇ ಪಾದದವರಿಗೆ 8, 11,ರ ಮಧ್ಯಾಹ್ನ 16, 18, 20ರ ಬೆಳಗ್ಗೆ 24, 28

ಅನುರಾಧದವರಿಗೆ 2, 10ರ ಮಧ್ಯಾಹ್ನ 11ರ ಬೆಳಗ್ಗೆ 17, 23,ರ ಬೆಳಗ್ಗೆ, 29

ಜ್ಯೇಷ್ಠದವರಿಗೆ 2, 8, 10ರ ಬೆಳಗ್ಗೆ, 24, 26, 28, 30 ಒಳಿತಿನ ದಿನಗಳು.

## ಧನುಸ್ಸು :

ಧನಲಾಭ, ಕೆಟ್ಟ ಸಲಹೆಗಳ ಬಗ್ಗೆ ಎಚ್ಚರವಿರಬೇಕು. ಎರಡನೇ ಪಕ್ಷದಲ್ಲಿ ಪ್ರಯಾಣ ತುಸು ಹೊಟ್ಟೆನೋವು. ಅಧಿಕಾರಿಗಳ ಗೌರವ ಹೆಚ್ಚುತ್ತದೆ. ವಿವಾದಗಳಿದ್ದರೂ ಜಯ ಚಿಂತೆ ಇದ್ದೇ ಇದ್ದು, ಉತ್ಸಾಹ ಭಂಗ.

ಮೂಲಾದವರಿಗೆ 4, 10ರ ಮಧ್ಯಾಹ್ನ 11ರ ಬೆಳಗ್ಗೆ 12ರ ಮಧ್ಯಾಹ್ನ 19, 21, 27, 31

ಪೂರ್ವಾಷಾಢದವರಿಗೆ 1, 3, 5, 10ರ ಬೆಳಗ್ಗೆ 11ರ ಮಧ್ಯಾನ್ನ 12ರ ಬೆಳಗ್ಗೆ 14, 20, 22, 26, 30

ಉತ್ತರಾಷಾಢ 1 ಪಾದವರಿಗೆ 4, 10ರ ಮಧ್ಯಾಹ್ನ, 11ರ ಬೆಳಗ್ಗೆ 12ರ ಮಧ್ಯಾಹ್ನ 19, 21, 26, 31 ಒಳಿತಿನದಿನಗಳು.

## ಮಕರ :

ಪ್ರಣಯಭಾವ, ಮೊದಲಪಕ್ಷದಲ್ಲಿ ಧನ ಯಶೋ ಲಾಭಗಳು ಆದರೆ ಪಾಪಪ್ರವರ್ತನೆ. ವಿವಾದಗಳು ಹೆಚ್ಚು ವೆಚ್ಚ.

ಉತ್ತರಾಷಾಢ 2, 3, 4 ಪಾದಗಳವರಿಗೆ 2, 6, 12, 14, 19, 22ರ ಮಧ್ಯಾಹ್ನ 23ರ ಬೆಳಗ್ಗೆ, 29

ಶ್ರವಣದವರಿಗೆ 1, 7, 12ರ ಬೆಳಗ್ಗೆ 13, 20, 23ರ ಬೆಳಗ್ಗೆ 28

ಧನಿಷ್ಠಾ 1, 2 ಪಾದದವರಿಗೆ 1, 2, 6, 12ರ ಮಧ್ಯಾಹ್ನ 14, 19, 21, 24, 29 ಒಳಿತಿನ ದಿನಗಳು.

## ಕುಂಭ :

ಆಪ್ತರಿಂದ ಬೇರ್ಪಡೆ ಧನಲಾಭವಿದ್ದರೂ ಹೆಚ್ಚು ವೆಚ್ಚ ಯಶಸ್ಸು. ಹೊಸಉಡುಪು, ಧಾನ್ಯಲಾಭ. ದೇಹಘಾತವಾಗಬಹುದು. ಧಾರ್ಮಿಕ ಪ್ರವರ್ತನೆ.

ಧನಿಷ್ಠಾ 2, 3, 4 ಪಾದಗಳವರಿಗೆ 4, 8, 14, 24, 26, 28, 31

ಶತಭಿಷದವರಿಗೆ 5, 17, 23, 27

ಪೂರ್ವಾಭಾದ್ರ 1,2,3 ಪಾದಗಳವರಿಗೆ 4, 8, 14, 16 24, 26, 31 ಒಳಿತಿನ ದಿನಗಳು.

## ಮೀನ :

ಪ್ರಯಾಣ. ಹೆಂಡತಿಯ ಅತೃಪ್ತಿ ಕಣ್ಣುನೋವು ಅಥವಾ ಹೊಟ್ಟೆನೋವು. ಮಕ್ಕಳಬಗ್ಗೆ ಚಿಂತೆ, ಯಶಸ್ಸು, ದ್ವಿತೀಯಪಕ್ಷ ಸಾಪೇಕ್ಷವಾಗಿ ಉತ್ತಮ

ಪೂರ್ವಾಭಾದ್ರ 4 ಪಾದದವರಿಗೆ 1, 6, 10 11ರ ಮಧ್ಯಾಹ್ನ 16, 18, 20 ರಬೆಳಗ್ಗೆ 26, 28, 30

ಉತ್ತರಾಭಾದ್ರದವರಿಗೆ 2, 7, 10,ರ ಮಧ್ಯಾಹ್ನ 11ರ ಬೆಳಗ್ಗೆ 17, 19, 27, 29

ರೇವತಿಯವರಿಗೆ 1, 6, 10ರ ಬೆಳಗ್ಗೆ 11ರ ಮಧ್ಯಾಹ್ನ 16, 18, 20, 26, 28, 30ರ ಬೆಳಗ್ಗೆ ಒಳಿತಿನ ದಿನಗಳು.

ಶ್ರೀ ಪದ್ಮಾವತೀ ದೇವಾಲಯ



ಅರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಅರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರದಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1 | ಆಮಂತ್ರಣೋತ್ಸವ1 | ರೂ 400 |
| 2 | ಅಭಿಷೇಕ* | ರೂ 500 |
| 3 | ಗಂಧ | ರೂ 300 |
| 4 | ಪುನುಗು* | ರೂ 200 |
| 5 | ಜಾಫ್ರಾ* | ರೂ 100 |
| 6 | ಕಸ್ತೂರಿ* | ರೂ 100 |
| 7 | ಸಹಸ್ರಕಲಶಾಭಿಷೇಕ | ರೂ 3000 |
| 8 | ತಿರುಪ್ಪಾವಡಾ2 | ರೂ 6000 |
| 9 | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10 | ಮುಕುರ ಮಂಟಪದಲ್ಲಿ ಡೋಲೋತ್ಸವ2 | ರೂ 1500 |
| 11 | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ2 | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1 ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ

* 2,3,4 5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ

2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು

ವಿವರಗಳಿಗೆ **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ ಬಿ ಸಿ ಒಳಗಿನ ಕಾಟೇಜುಗಳು | ,, | ರೂ 50–00 |
| ಎಸ್ ವಿ ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | , | ರೂ 35–00 |
| ಎಚ್ ಆರ್ ಜಿ ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ ಸಿ ಕಾಟೇಜು | ,, | ರೂ 100–00 |
| ಎಸ್ ಎಂ ಸಿ ಪೂರ್ವ ನಂ 9 | , | ರೂ 50–00 |
| ಎ ಟಿ ಸಿ ನಂ 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳ ಕೋಣೆ | ರೂ 12–00 |
| ನಾಲ್ಕು ,, | ರೂ 15–00 |
| ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ ರಿಸೆಪ್ಷನ್ ಆಫೀಸರ್, ಟಿ ಟಿ ಡಿ ತಿರುಪತಿ

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ ಡಿ ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ, ತಿರುಮಲೆಗಳಿಗೆ ಬನ್ನಿರಿ ಅಂಚೆಯಲ್ಲಿನ ವಿಳಂಬಕ್ಕೆ ತಿ ತಿ ದೇ ಹೊಣೆಯಲ್ಲ ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

**ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.**

**ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.**

**ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.**

**ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.**

★ ನಿಮ್ಮ ಆಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) [illegible] ರವನ್ನು ಅಭ್ಯಸಿಸಿ.

★ ಸ್ನಾನದ [illegible] ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.